





ಬಾರಯ್ಯ ವೆಂಕಟರಮಣ ಭಕ್ತರ ನಿಧಿಯೇ
ತೋರಯ್ಯ ನಿನ್ನದಯೆ ತೋಯಜಾಂಬಕನೆ

ವೇದಗೋಚರ ಬಾರೋ ಆದಿ ಕಚ್ಛಪ ಬಾರೋ
ಮೋದಸೂಕರ ಬಾರೋ ಸದಯ ನರಸಿಂಹ ಬಾರೋ

ಪಾವನ ಭಾರ್ಗವ ಬಾರೋ ರಾಮಕೃಷ್ಣನೆ ಬಾರೋ
ಪ್ರೇಮ ಬುದ್ಧನೆ ಬಾರೋ ಸ್ವಾಮಿ ಕಲ್ಕಿಯೆ ಬಾರೋ

ಅರವಿಂದ ನಾಭನೆ ಬಾರೋ ಸುರರ ಪ್ರಭುವೆ ಬಾರೋ
ಪುರುಹೂತ ವಂದ್ಯ ಬಾರೋ ಪುರಂದರ ವಿಠಲ ಬಾರೋ

-ಶ್ರೀ ಪುರಂದರದಾಸರು.



# ತಿರುಪತಿ ರೈಲುಗಳ ಆಗಮನ ನಿರ್ಗಮನಗಳು

ತಿರುಪತಿಗೆ ಬರುವ ಹಾಗೂ ತಿರುಪತಿಯಿಂದ ಹೊರಡುವ ರೈಲುಗಳ ಬ್ರಾಡ್‌ಗೇಜ್ ಹಾಗೂ ಮೀಟರ್‌ಗೇಜ್ ರೈಲುಗಳ ವಿವರಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ. ಪಾಠಕ ಯಾತ್ರಿಕರು ಗಮನಿಸಿ ತಮ್ಮ ಪ್ರಯಾಣವನ್ನು ಸುಖಕರ ಮಾಡಿಕೊಳ್ಳಬೇಕೆಂದು ಕೋರಲಾಗಿದೆ.

| ರೈಲು ವಿವರ | ತಿರುಪತಿ ಸೇರುವ ವೇಳೆ | ತಿರುಪತಿ ಬಿಡುವ ವೇಳೆ |
|---|---|---|
| | ಬ್ರಾಡ್‌ಗೇಜ್ | |
| ಕಾಕಿನಾಡ (ಪ್ಯಾಸೆಂಜರ್) | ಬೆಳಗ್ಗೆ 3-15 ಗಂಟೆಗೆ | ರಾತ್ರಿ 23-30 ಗಂಟೆಗೆ |
| ಮೈಸೂರು (ಪ್ಯಾಸೆಂಜರ್) | ಬೆಳಗ್ಗೆ 4-00 ಗಂಟೆಗೆ | ರಾತ್ರಿ 22-00 ಗಂಟೆಗೆ |
| ಸಿಕಂದರಾಬಾದ್ (ನಾರಾಯಣಾದ್ರಿ ಎಕ್ಸ್‌ಪ್ರೆಸ್) | ಬೆಳಗ್ಗೆ 6-25 ಗಂಟೆಗೆ | ಸಂಜೆ 18-30 ಗಂಟೆಗೆ |
| ವಿಶಾಖಪಟ್ಟಂ (ತಿರುಮಲ ಎಕ್ಸ್‌ಪ್ರೆಸ್) | ಬೆಳಗ್ಗೆ 7-35 ಗಂಟೆಗೆ | ರಾತ್ರಿ 19-00 ಗಂಟೆಗೆ |
| ಹೈದರಾಬಾದು (ರಾಯಲಸೀಮೆ ಎಕ್ಸ್‌ಪ್ರೆಸ್) | ಬೆಳಗ್ಗೆ 9-05 ಗಂಟೆಗೆ | ಸಂಜೆ 15-30 ಗಂಟೆಗೆ |
| ಮದ್ರಾಸು (ಸಪ್ತಗಿರಿ ಎಕ್ಸ್‌ಪ್ರೆಸ್) | ಬೆಳಗ್ಗೆ 9-30 ಗಂಟೆಗೆ - | ಬೆಳಗ್ಗೆ 10-05 ಗಂಟೆಗೆ |
| ಒಂಗೋಲು (ಪ್ಯಾಸಿಂಜರ್) | ಮಧ್ಯಾಹ್ನ 12-00 ಗಂಟೆಗೆ | ಮಧ್ಯಾಹ್ನ 14-15 ಗಂಟೆಗೆ |
| ಕೊಚ್ಚಿನ್ - ವಾರಣಾಸಿ (ವಾರಣಾಸಿ ಎಕ್ಸ್‌ಪ್ರೆಸ್) (ತಿರುಪತಿಯ ಮೂಲಕ ಮಂಗಳವಾರಗಳಲ್ಲಿ) | ಮಧ್ಯಾಹ್ನ 13-15 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ (ಮಂಗಳವಾರ) |
| ವಾರಣಾಸಿ - ಕೊಚ್ಚಿನ್ (ಕೊಚ್ಚಿನ್ ಎಕ್ಸ್‌ಪ್ರೆಸ್) (ತಿರುಪತಿ ಮೂಲಕ ಭಾನುವಾರಗಳಲ್ಲಿ) | ಮಧ್ಯಾಹ್ನ 13-15 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ (ಭಾನುವಾರ) |
| ವಾರಣಾಸಿ - ತಿರುಪತಿ (ವಾರಣಾಸಿ ಎಕ್ಸ್‌ಪ್ರೆಸ್) ಮಂಗಳವಾರ - ಭಾನುವಾರಗಳಲ್ಲಿ | ಮಧ್ಯಾಹ್ನ 13-20 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ |
| ಪೂರಿ - ತಿರುಪತಿ (ಪೂರಿ ಎಕ್ಸ್‌ಪ್ರೆಸ್) ಬುಧ - ಶುಕ್ರವಾರಗಳಲ್ಲಿ | ಮಧ್ಯಾಹ್ನ 13-25 ಗಂಟೆಗೆ | ಬೆಳಗ್ಗೆ 9-45 ಗಂಟೆಗೆ |
| ಮದರಾಸು - ತಿರುಪತಿ (ಸಪ್ತಗಿರಿ ಎಕ್ಸ್‌ಪ್ರೆಸ್) | ಮಧ್ಯಾಹ್ನ 16-50 ಗಂಟೆಗೆ | ಸಂಜೆ 17-30 ಗಂಟೆಗೆ |
| ತಿರುಪತಿ - ಕಡಪ (ಇಂಟರ್‌ಸಿಟಿ ಎಕ್ಸ್‌ಪ್ರೆಸ್) | ರಾತ್ರಿ 20-15 ಗಂಟೆಗೆ | ಬೆಳಗ್ಗೆ 6-30 ಗಂಟೆಗೆ |
| ತಿರುಪತಿ - ಗೂಡೂರು (ಗೂಡೂರು ಪ್ಯಾಸೆಂಜರ್) | ರಾತ್ರಿ 20-30 ಗಂಟೆಗೆ | ಬೆಳಗ್ಗೆ 6-25 ಗಂಟೆಗೆ |
| ಹೈದರಾಬಾದು (ಕೃಷ್ಣಾ ಎಕ್ಸ್‌ಪ್ರೆಸ್) | ರಾತ್ರಿ 21-30 ಗಂಟೆಗೆ | ಬೆಳಗ್ಗೆ 5-30 ಗಂಟೆಗೆ |
| ಅರಕೋಣಂ ಅರಕೋಣಂ ಪ್ಯಾಸೆಂಜರ್ | ರಾತ್ರಿ 23-15 ಗಂಟೆಗೆ | ಬೆಳಗ್ಗೆ 4-05 ಗಂಟೆಗೆ |
| | ಮೀಟರ್ ಗೇಜ್ ರೈಲುಗಳು | |
| ಮಧುರೆ (ಮೀನಾಕ್ಷಿ ಎಕ್ಸ್‌ಪ್ರೆಸ್) | ಬೆಳಗ್ಗೆ 4-50 ಗಂಟೆಗೆ | ಮಧ್ಯಾಹ್ನ 15-40 ಗಂಟೆಗೆ |
| ಗುಂತಕಲ್ (ಗುಂತಕಲ್ ಪ್ಯಾಸೆಂಜರ್) | ಬೆಳಗ್ಗೆ 5-15 ಗಂಟೆಗೆ | ಬೆಳಗ್ಗೆ 6-00 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಬೆಳಗ್ಗೆ 8-55 ಗಂಟೆಗೆ | ಬೆಳಗ್ಗೆ 10-30 ಗಂಟೆಗೆ |
| ಮಹಬೂಬ್ ನಗರ್ (ವೆಂಕಟಾದ್ರಿ ಎಕ್ಸ್‌ಪ್ರೆಸ್) | ಬೆಳಗ್ಗೆ 9-30 ಗಂಟೆಗೆ | ಬೆಳಗ್ಗೆ 14-40 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಬೆಳಗ್ಗೆ 11-25 ಗಂಟೆಗೆ | ಸಂಜೆ 17-30 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಮಧ್ಯಾಹ್ನ 14-35 ಗಂಟೆಗೆ | ಬೆಳಗ್ಗೆ 7-00 ಗಂಟೆಗೆ |
| ಗುಂತಕಲ್ (ಗುಂತಕಲ್) | ಸಂಜೆ 18-45 ಗಂಟೆಗೆ | ರಾತ್ರಿ 21-45 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಸಂಜೆ 19-45 ಗಂಟೆಗೆ | ಬೆಳಗ್ಗೆ 2-45 ಗಂಟೆಗೆ |





ಲೇಖನ/ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ

ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ

ದೊರೆಯುವುವು

ಬಿಡಿ ಪ್ರತಿ ೪—೦೦

ವಾರ್ಷಿಕ ಚಂದಾ ೪೮—೦೦

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ||


ಸಂಪುಟ — 27 ಡಿಸೆಂಬರ್ 1996 ಸಂಚಿಕೆ —7


# ವಿಷಯಸೂಚಿ



ಮುಖ ಚಿತ್ರ : ಗೋದಾದೇವಿ - ಚಿತ್ರ - ಉಮಾಪತಿ.

ಹಿಂಬದಿಯಲ್ಲಿ : ಶ್ರೀವಿಲ್ಲಿಪುತ್ತೂರು ಆಲಯ.

ಒಳಗಡೆ : 1) ತಿರುಚಾನೂರಿನಲ್ಲಿ ಗರುಡವಾಹನ.

2) ತಿರುಚಾನೂರಿನಲ್ಲಿ ಸರಸ್ವತೀ ಅಲಂಕಾರ.




ಮಾಸಾನಾಂ ಮಾರ್ಗಶೀರ್ಷೋಽಹಂ ಎಂಬುದು ಭಗವಂತ ಗೀತೆಯಲ್ಲಿ ಹೇಳಿದ ಮಾತು. ಹನ್ನೆರಡು ತಿಂಗಳುಗಳಲ್ಲಿ ಮಾರ್ಗಶಿರ ಅತ್ಯಂತ ಶ್ರೇಷ್ಠ ಎಂಬುದು ಆತನ ಅಭಿಪ್ರಾಯ. ಕಾಲನಿಯಾಮಕನೂ, ಕಾಲವನ್ನು ಸೃಜಿಸಿದವನೂ ಆದ ಆ ಸ್ವಾಮಿಯೇ ವರ್ಷಚಕ್ರದಲ್ಲಿ ಮಾರ್ಗಶಿರ ಮಾಸ ಉತ್ತಮವೆಂದಾಗ ಅಲ್ಲವೆನ್ನಲು ನಾವು ಯಾರು? ಪ್ರಶ್ನೆ ಮಾರ್ಗಶೀರ್ಷದ್ದಲ್ಲ. ಒಂದು ಮಾಸದ್ದು. ಅದು ಹನ್ನೊಂದು ತಿಂಗಳಿಗಿಂತ ಭಿನ್ನ,ಬೇರೆ, ಉತ್ತಮ ಹೇಗೆ ? ಅವನೇ ಎಲ್ಲ ಮಾಸಗಳನ್ನೂ ಸೃಷ್ಟಿಸಿದಾಗ ಅವನ ಸೃಜನೆಯಲ್ಲಿ ಮೇಲು ಕೀಳುಗಳೇನು? ಮಿಕ್ಕದ್ದು ಕೀಳು ಎಂಬುದು ಅವನ ಮಾತೇನಲ್ಲ. ಅವನಿಗೆ ಮೇಲು ಕೀಳುಗಳೇನು ಬಂತು - ನಮ್ಮ ದೃಷ್ಟಿದೋಷದ ಹೊರತು. ಮಾರ್ಗಶಿರ ಮಾಸದ ಹುಣ್ಣಿಮೆಯ ದಿನದಲ್ಲಿ ಭಗವದ್ಗೀತೆಯನ್ನು ಭವಜೀವಿ ಅರ್ಜುನನಿಗೆ ಉಪದೇಶಿಸಿದ ಕೃಷ್ಣ. ಗೀತಾ ಜಯಂತಿಯ ದಿನವನ್ನು ಒಳಗೊಂಡ ತಿಂಗಳು ಅದು. ಅದೇ ತಾನು ತಿಂಗಳುಗಳಲ್ಲಿ ಮಾರ್ಗಶಿರ, ಪಾಂಡವರಲ್ಲಿ ಅರ್ಜುನ, ಪ್ರಾಣಿಗಳಲ್ಲಿ ಸಿಂಹ, ಎಂದು ತನ್ನ ಬಗ್ಗೆ ವಿವರಣೆ ನೀಡಿದ ಅರ್ಜುನನಿಗೆ - ಎಂದರೆ ಅರಿವು ಕೊರೆಯಾಗಿ ಕೊರಗುವ ನರನಿಗೆ. ಈ ಅಳತೆಯಲ್ಲಿಯೇ ನೋಡಬೇಕು ಮಾರ್ಗಶಿರವನ್ನು.

ಅವ ಒಬ್ಬಳ ಮಗನಾಗಿ ಹುಟ್ಟಿ ಒಬ್ಬಳ ಮಗನಾಗಿ ಬೆಳೆದ, ತಾಯಿಗೆ ಬಾಯಲ್ಲಿ ಭುವನವನ್ನು ತೋರಿದವನು (ಅರ್ಜುನನೂ ಅದನ್ನು - ಆ ವಿಶ್ವರೂಪವನ್ನು ನೋಡಿದವನೇ.) ಅವನಿಗೆ ನರನನ್ನು ಉದ್ಧರಿಸುವ ಕಾಯಕ. ಪದೇ ಪದೇ ಭೂಮಿಗೆ ಬಂದು ಧರ್ಮ ಸಂಸ್ಥಾಪನೆಯನ್ನು ಮಾಡುವ ತವಕ. ಹಾಗೆಂದೇ ಅರ್ಜುನನಿಗೆ ಅಭಯನೀಡುತ್ತಾನೆ - ಮಾಶುಚ :

ಗೋದಾದೇವಿ ಹನ್ನೆರಡುಮಂದಿ ಆಳ್ವಾರರಲ್ಲಿ ಒಬ್ಬಾಕೆ. ಆಕೆಗೆ ಅವನ ಹೊರತು ಅನ್ಯ ಪುರುಷರಿಲ್ಲ. ಅವನನ್ನು ಪಡೆಯುವುದು. ಆಕೆಯ ಜೀವನ ಧ್ಯೇಯ, ಮಾರ್ಗಳಿತಿಂಗಳ ವ್ರತ ಆಕೆಯದು. ನಮ್ಮನ್ನೆಲ್ಲ ಎಬ್ಬಿಸಿ ಕರೆದೊಯ್ಯುವ ಬಯಕೆ ತಾನುಕಂಡ ಸಾಕ್ಷಾತ್ಕಾರದ ಹಾದಿಗೆ. ಎಂತಲೇ ಎಲ್ಲರನ್ನೂ ಎಚ್ಚರಿಸುತ್ತ ನಡೆದಿದ್ದಾಳೆ ಅಂದಿನಿಂದಲೂ - ಏಳಿ ಎದ್ದು ಅವನನ್ನು ನಮಿಸಿ ಬದುಕಿರಿ - ಎಂಬುದಾಗಿ.

ಆಕೆಯ ಮಾತು ತಿರುಪ್ಪಾವೈ ಎಂಬ ವ್ರತಮೂಲವಾಯಿತು. ಆಕೆಯ ಮಾತು 'ಪಾತಕಂಗಳ ತೀರಿಪುದು, ಪರಮನಡಿಯ ಕಾಣಿಪುದು, ವೇದಗಳಷ್ಟಕ್ಕೂ ಬೀಜವಾಗುವುದು. ಇದು ಕೋದೈ ತಮಿಳ್ - ಇದು ಮಾರ್ಗಳಿ ಮಾಸದ ಸಾಧನೆಯಸಾರ.

ಗೀತೆಯ ಜ್ಞಾನ ವಾಹಿನಿಯಲ್ಲಿ ಈಜಾಡುವುದು, - ಈಸಿ ಜೈಸುವುದು ಸಾಧ್ಯವಾಗಬೇಕು. ಇನ್ನೊಂದು ಮಾರ್ಗವೂ ಇದೆ - ಗೋದೆಯ ಮಾರ್ಗದಲ್ಲಿ - ಎಚ್ಚರದಿಂದ ನಡೆದು - ಭಕ್ತಿಯ ಪ್ರಪತ್ತಿ ಮಾರ್ಗದಲ್ಲಿ ನಡೆದು ಗಮ್ಯವನ್ನು ಸೇರುವುದು. ಎರಡಕ್ಕೂ ಮಾರ್ಗಶಿರ ಮಾಸ ದಿಕ್ಸೂಚಿ.

ಹೀಗಾದ್ದರಿಂದ ಹನ್ನೆರಡು ತಿಂಗಳು ಇರಬಹುದಾದರೂ ಮಾರ್ಗಶಿರ ಮುಖ್ಯವಾಗುತ್ತದೆ. ನಮಗೆ ಮಣಿಯುವ ಮನವಿದ್ದಲ್ಲಿ ಆ ಮಹಾನನು ಮಾಸವನ್ನು ನೋಡಲಾರ ಎಂಬುದು ನಿಜವೇ ಆದರೂ ಮುಹೂರ್ತ ನೋಡುವ ಮೀನ ಮೇಷವೆಣಿಸುವ ನಾವು ಮಾರ್ಗಶಿರವನ್ನು ಪುರಸ್ಕರಿಸುವಂತೆ ಆಗಬೇಕು.

# ಸಂಗೀತದಲ್ಲಿ ಶ್ರೀ

---ಎಂ. ಸಿ. ನರಸಿಂಹನ್.

ಲಕ್ಷ್ಮೀ ಕ್ಷೀರ ಸಮುದ್ರರಾಜ ತನಯಾಂ
ಶ್ರೀರಂಗಧಾಮೇಶ್ವರೀಂ
ದಾಸೀಭೂತ ಸಮಸ್ತ ದೇವವನಿತಾಂ
ಲೋಕೈಕ ದೀಪಾಂಕುರಾಂ
ಶ್ರೀಮನ್ಮಂದ ಕಟಾಕ್ಷ ಲಬ್ಧ
ವಿನುತ ಬ್ರಹ್ಮೇಂದ್ರ ಗಂಗಾಧರಾಂ
ತ್ವಾಂ ತ್ರೈಲೋಕ್ಯ ಕುಟುಂಬಿನೀಂ
ಸರಸಿಜಾಂ ವಂದೇ ಮುಕುಂದಪ್ರಿಯಾಂ

ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣರಾದ ಬ್ರಹ್ಮ ವಿಷ್ಣು, ಶಿವರುಗಳ ಕಾರ್ಯದಲ್ಲಿ ಸದಾ ಸಹಾಯ ಕರಾಗಿರುವ ಅವರ ಪತ್ನಿಯರು ಸರಸ್ವತಿ, ಮಹಾ ಲಕ್ಷ್ಮಿ, ಪಾರ್ವತಿಯರು ನಮ್ಮನ್ನು ಸದಾ ಕಾಪಾಡು ವರು. 'ಲಕ್ಷ್ಮೀ' ಎಂಬ ಹೆಸರೇ 'ಲಕ್ಷಣ' - ಸರ್ವ ಲಕ್ಷಣ ಸಂಪನ್ನೆ - ಎಲ್ಲಾ ಶುಭ ಗುಣಗಳಿಂದ ಪರಿಪೂರ್ಣೆ, ವರದಾಯಕಿ ಎಂದೇ ಅರ್ಥ. ಆಕೆ ಸಕಲ ಸೌಭಾಗ್ಯ ಶಕ್ತಿ, ಸಮೃದ್ಧಿ, ಶಾಂತಿ ಪ್ರಗತಿಗಳಿಗೆ ಪ್ರತೀಕ. ಪ್ರಕೃತಿ ಮಾತೆ. ಸರಸ್ವತಿ ಕುಶಾಗ್ರಬುದ್ಧಿ ಹಾಗೂ ಸಾಂಸ್ಕೃತಿಕ ಕಲಾ ಸೌಭಾಗ್ಯದಾತೆ. ಪಾರ್ವತಿ, ದೈಹಿಕ - ಮಾನ ಸಿಕ - ಆಧ್ಯಾತ್ಮಿಕ ಬಲವರ್ಧಿತೆ.

ಈ ಮೂವರೂ ತಮಿಳುಭಾಷೆಯಲ್ಲಿ 'ಅಲೈ ಮಗಳ್' 'ಕಲೈಮಗಳ್' 'ಮಲೈಮಗಳ್' ಎಂದೇ ಸಂಪೂಜಿತರು. ಹೀಗೆ ಈ ಮಾತೆ ಬೃಹದ್ರೂಪಿ ಯಾಗಿ ವಿಶ್ವರೂಪಿಯಾಗಿ ಮನೆ ಮನ ತುಂಬು ತ್ತಾಳೆ.

ಹಿಂದೆ ದೂರ್ವಾಸರು ಕೃಪೆಯಿಂದ ನೀಡಿದ ದೇವಿಯ ಮಾಲೆಯನ್ನು ಇಂದ್ರ ಐರಾವತಕ್ಕೆ ನೀಡಿ ದನು. ಅದರ ಫಲ ದೂರ್ವಾಸರ ಶಾಪ, ಇಂದ್ರನೊ ಡನೆ ತ್ರೈಲೋಕ್ಯವೇ ನಿಃಶ್ರೀಕವಾಗಿಬಿಟ್ಟಿತು. ಮಹಾ ಲಕ್ಷ್ಮಿಯು ಅಂತರ್ಹಿತಳಾದುದರಿಂದ ದೇವತೆಗಳೂ ನಿಃಸತ್ವರಾದರು. ದೈತ್ಯಾಕ್ರಮಣವಾಗಿ ಬಿಟ್ಟಿತು. ಇಂದ್ರಾದಿಗಳು ದಿಕ್ಕು ಗಾಣದೆ ಮಹಾವಿಷ್ಣುವಿನ ಮೊರೆ ಹೊಕ್ಕರು. ಆಗ ಶ್ರೀ ವಿಷ್ಣುವಿನ ಆಣ ತಿಯಂತೆ ದೈತ್ಯರೊಡನೆ ಸಂಧಾನ ಮಾಡಿಕೊಂಡು ಅಮೃತಕ್ಕಾಗಿ ಕ್ಷೀರಸಮುದ್ರ ಮಥನ ಮಾಡಿದರು. ವಿಷ್ಣುವು ಕೂರ್ಮರೂಪದಿಂದ ಮಂದರ ಪರ್ವತ ಹೊತ್ತು, ಕೇಶವನಾಗಿ ಮೇಲೆ ನಿಂತು, ನಿಜರೂ ಪದಿಂದ ದೇವತೆಗಳ ಸಹಿತ ಸಮುದ್ರ ಕಡೆದನು. ಅಮೃತ ಲಭಿಸಿತು. ಇದು ಸರ್ವವೇದ್ಯ. ಈ ಮಂಥನದಿಂದ ಶ್ರೀಮಹಾಲಕ್ಷ್ಮಿ ಕ್ಷೀರಸಮುದ್ರದಿಂ ದೆದ್ದು ಹೊರಬಂದಳು. ದೇವ ಮಹರ್ಷಿಗ ಳೆಲ್ಲಾ ಅವಳನ್ನು 'ಶ್ರೀಸೂಕ್ತ' ಹೇಳಿ ಸ್ತುತಿಸಿದರು. ಗಂಧರ್ವರ ಗಾನ, ಅಪ್ಸರೆಯರ ನರ್ತನ, ಗಂಗಾದಿ ತೀರ್ಥಗಳಿಂದ ದಿಗ್ಗಜಗಳಿಂದ ಸ್ನಾನ, ಕ್ಷೀರಸಾಗ ರನಿಂದ ಎಂದೂ ಬಾಡದ ಕಮಲಪುಷ್ಪಮಾಲಾ ಸಮರ್ಪಣ, ವಿಶ್ವಕರ್ಮನಿಂದ ಭೂಷಣ ಅರ್ಪಣ, ಹೀಗೆ ಸಕಲ ಸೌಭಾಗ್ಯ ಪೂರಿತೆ, ಮಂದಸ್ಮಿತೆಯಾಗಿ ಮಹಾಲಕ್ಷ್ಮಿ ಶ್ರೀಮಹಾವಿಷ್ಣುವಿನ ವಕ್ಷಸ್ಥಳವನ್ನು ಅಲಂಕರಿಸಿದಳು. ಮೂರು ಲೋಕಗಳೂ ಮತ್ತೆ ಸಶ್ರೀಕವಾಯಿತು.

'ನಮಾಮಿ ಧರ್ಮನಿಲಯಾಂ
ಕರುಣಾಂ ಲೋಕಮಾತರಮ್
ಪದ್ಮಪ್ರಿಯಾಂ ಪದ್ಮಹಸ್ತಾಂ
ಪದ್ಮಾಕ್ಷೀಂ ಪದ್ಮ ಸುನ್ದರೀಮ್
ಪದ್ಮೋದ್ಭವಾಂ ಪದ್ಮಮುಖೀಂ
ಪದ್ಮನಾಭ ಪ್ರಿಯಾಂ ರಮಾಮ್
ಪದ್ಮಮಾಲಾಧರಂ ದೇವೀಂ
ಪದ್ಮಿನೀಂ ಪದ್ಮಗನ್ಧಿನೀಮ್'

ಶ್ರೀ ವಿಷ್ಣುಕೃಪಾಪೋಷಿತ ಅಮೃತ ಪಾನದಿಂದ ದೇವತೆಗಳು ಪ್ರಬಲರಾಗಿ ಅಮರರಾದರು. ಇಂದ್ರನಿಗೆ ತ್ರೈಲೋಕ್ಯಾಧಿಪತ್ಯ ತಿರುಗಿ ಕೈಸೇರಿತು. ಇಂದ್ರನು ಮಹಾಲಕ್ಷ್ಮಿಯನ್ನು ಭಕ್ತಿ ಭಾವ ಪೂರ್ಣ 'ಶ್ರೀಸ್ತುತಿ' ಶ್ಲೋಕದಿಂದ ಸ್ತುತಿಸಿದನು.

ವಿಷ್ಣುವು ದುಷ್ಟಶಿಕ್ಷಣ, ಶಿಷ್ಟರಕ್ಷಣ, ಧರ್ಮಸಂ ಸ್ಥಾಪನಾರ್ಥ ಹೊಸ ಹೊಸ ಅವತಾರ ಎತ್ತಿದ ಹಾಗೆಲ್ಲಾ ಅವನಿಗೆ ಅನುರೂಪವಾದ ಅವತಾರ ವನ್ನೇ ಮಹಾಲಕ್ಷ್ಮಿಯೂ ಎತ್ತಿ ಅವನೊಡನೇ ಇರು ವಳು. ರಾಮಾವತಾರದಲ್ಲಿ ಸೀತೆ, ಕೃಷ್ಣಾವತಾರ ದಲ್ಲಿ ರುಕ್ಮಿಣಿ ಹೀಗೆ, ಇದನ್ನೇ ಆಚಾರ್ಯ ರಾಮಾ ನುಜರು ತಮ್ಮ 'ಶರಣಾಗತಿ ಗದ್ಯ'ದಲ್ಲಿ-

'ನಿತ್ಯ ಅನಪಾಯಿನೀಂ ನಿರವದ್ಯಾಂ
ದೇವ-ದೇವ ದಿವ್ಯಮಹಿಷೀಂ
ಅಖಿಲ ಜಗನ್ಮಾತ್ರರಂ ಅಸ್ಮನ್
ಮಾತರಂ ಅಶರಣ್ಯ ಶರಣ್ಯಾಂ
ಅನನ್ಯ ಶರಣಃ ಶರಣಂ ಅಹಂ ಪ್ರಪದ್ಯೇ

ಎಂದು ಪ್ರಪತ್ತಿ ಮಾಡಿ ಈ ವಾತ್ಸಲ್ಯಮಯಿಯ, ಸೌಲಭ್ಯ - ಸೌಶೀಲ್ಯ ಗುಣಪೂರಿತೆ ಜಗನ್ಮಾತೆಯ ಪ್ರಸನ್ನತೆ ಪ್ರಥಮತಃ ಕೋರಿದ್ದಾರೆ. ತಾಯಿ ಸದಾ ತಂದೆಯ ಕ್ಷಮಾಗುಣವನ್ನು ಹೆಚ್ಚಿಸುವವಳಲ್ಲವೆ ?

ಶ್ರೀ ವೇಂಕಟೇಶ ಪ್ರಪತ್ತಿಯಲ್ಲಿ ಜಗನ್ಮಾತೆಯ ಶ್ರೀಚರಣಗಳಲ್ಲೇ ಪ್ರಥಮತಃ ಶರಣಾಗತಿ.

ಈಶಾನಾಂ ಜಗತೋಸ್ಯ ವೇಂಕಟಪತೇಃ
ವಿಷ್ಣೋಃ ಪರಾಂ ಪ್ರೇಯಸೀಂ
ತದ್ವಕ್ಷಸ್ಥಲ ನಿತ್ಯವಾಸ ರಸಿಕಾಂ
ತತ್ಕ್ಷಾಂತಿ ಸಂವರ್ಧಿನೀಮ್
ಪದ್ಮಾಲಂಕೃತ ಪಾಣಿ ಪಲ್ಲವಯುಗಾಂ
ಪದ್ಮಾಸನಸ್ಥಾಂ ಶ್ರಿಯಂ
ವಾತ್ಸಲ್ಯಾದಿ ಗುಣೋಜ್ವಲಾಂ
ಭಗವತೀಂ ವಂದೇ ಜಗನ್ಮಾತರಮ್

(ಈ ಜಗತ್ತಿಗೆ ಅಧೀಶ್ವರಿ, ಶ್ರೀ ವೇಂಕಟಾಚಲ ಪತಿಯ ಪತ್ನಿ, ಆತನ ವಕ್ಷಸ್ಥಲದಲ್ಲಿ ನಿತ್ಯವಾಸರ ಸಿಕೆ; ಪದ್ಮಗಳಿಂದ ಅಲಂಕೃತವಾದ ಚಿಗುರಿನಂಥ ಎರಡು ಕೈಗಳುಳ್ಳವಳು, ಪದ್ಮಾಸನಾಸೀನಳು; ವಾತ್ಸ ಲ್ಯಾದಿ ಸಕಲಗುಣಗಳಿಂದ ಅದ್ಭುತವಾಗಿ ಪ್ರಕಾಶಿ ಸುವವಳು; ಜಗನ್ಮಾತೆ. ಅಂಥ ಶ್ರೀ ಲಕ್ಷ್ಮೀದೇವಿಗೆ ನಮಸ್ಕರಿಸುತ್ತೇನೆ. 'ಪ್ರಪತ್ತಿ' ಎಂದರೆ ಶ್ರೀನಿವಾಸನ ಪಾದಾರವಿಂದಗಳಲ್ಲಿ ಶರಣಾಗತಿ - ಆಚಾರ್ಯ ರಾಮಾನುಜರು ತೋರಿದ ಮಾರ್ಗದಲ್ಲಿ. ಭಗವಂ ತನ ಸೃಷ್ಟಿ - ಸ್ಥಿತಿ - ಲಯ ಕಾರ್ಯಲೀಲೆ ಅತ್ಯಂತ ರಸವತ್ತಾದುದು. ಶ್ರೀನಿವಾಸ ಶ್ರೀದೇವಿಯ ಇಂಗಿತ ವನ್ನರಿತು ತನ್ನ ಲೀಲೆಯನ್ನು ಮುಂದುವರೆಸುವನು. ಆಕೆಯೂ ಅಷ್ಟೆ.

ಲಕ್ಷ್ಮೀ ಸವಿಭ್ರಮಾಲೋಕ
ಸುಭ್ರೂವಿಭ್ರಮ ಚಕ್ಷುಷೇ
ಚಕ್ಷುಷೇ ಸರ್ವಲೋಕಾನಾಂ
ವೇಂಕಟೇಶಾಯ ಮಂಗಳಮ್



### ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
### ಸಂಶೋಧನ ಕೇಂದ್ರ -- ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರ ವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತು ಶಿಲ್ಪದ ಹಾಗೂ, ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ಶೀಲತೆಯ, ತತ್ವ, ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- ತಿರುಪತಿ -- 517 502.



ಲಕ್ಷ್ಮಿಯ ಭಾವಪೂರ್ಣ ನೋಟಕ್ಕೆ ಅನುರೂಪವಾದ ಹುಬ್ಬಿನ ವಿಲಾಸದಿಂದ ಕೂಡಿದ ನೇತ್ರಗಳನ್ನು ಉಳ್ಳವನು ಶ್ರೀ ವೇಂಕಟೇಶ ಅಲ್ಲದೆ ಸರ್ವಲೋಕಗಳಿಗೂ ಕಣ್ಣಾಗಿದ್ದು ರಕ್ಷಿಸುವವ. ಆಹಾ ಎಂಥ ತಂದೆತಾಯಿ ನಮ್ಮವರು!

ಆಕೆಯ ಅಷ್ಟಲಕ್ಷ್ಮೀರೂಪಗಳು ಆದಿಲಕ್ಷ್ಮಿ, ಧಾನ್ಯಲಕ್ಷ್ಮಿ ಧೈರ್ಯಲಕ್ಷ್ಮಿ ಗಜಲಕ್ಷ್ಮಿ ಸಂತಾನಲಕ್ಷ್ಮಿ ವಿದ್ಯಾಲಕ್ಷ್ಮಿ ವಿಜಯಲಕ್ಷ್ಮಿ ಧನಲಕ್ಷ್ಮಿ - ಎಲ್ಲರೂ ಅಷ್ಟಸಿದ್ಧಿ ಪ್ರದಾಯಕರು, ಅಷ್ಟೈಶ್ವರ್ಯ ಸ್ವರೂಪರು. ಈಗ ಸಂಗೀತದಿಂದ ಜಗನ್ಮಾತೆಯ ಹಲವು ರೂಪಗಳನ್ನು ಅರ್ಚಿಸೋಣ-

೧. ಪ್ರಥಮತಃ 'ವಲಚಿ' ಎಂಬ ನವ ರಾಗ ಮಾಲಿಕೆ ವರ್ಣದಿಂದ ಶ್ರೀ ಮಹಾಲಕ್ಷ್ಮಿಗೆ ನಾದನಮನ. ಕೇದಾರ, ಶಂಕರಾಭರಣ, ಬೇಗಡೆ, ಕಾಂಬೋದಿ, ಬಿಲಹರಿ, ಯದುಕುಲ ಕಾಂಬೋದಿ, ಮೋಹನಮ್, ಕಲ್ಯಾಣಿ, ಶ್ರೀರಾಗಗಳೇ ಈ ಹೂಮಾಲೆಯ ವಿವಿಧ ಪುಷ್ಪಗಳು. ಕೃತಿಕಾರರು : ಕೋಟ್ಟೈವಾಶಲ್ ವೇಂಕಟರಮಣ ಐಯ್ಯರ್.

೨. ತಾಯಿ ಪಾರ್ವತಿ, ಪರ್ವತ ಕುಮಾರಿ, ಸರೋಜನಯನೆ, ಘೋರ ಮಹಿಷಸಂಹಾರಿಣಿ, ಸಿಂಹವಾಹಿನಿ, ಮಹೇಶ್ವರಿ, ಆ ಪರಾಶಕ್ತಿ ಜನನಿಯನ್ನು ಹಂಸಧ್ವನಿಯಲ್ಲಿ ಸ್ತುತಿಸಿದ್ದಾರೆ, ಕವಿ ಪಾಪನಾಶಂ ಶಿವನ್.

೩. ಅಂತೆಯೇ ತಾಯಿ ಸರಸ್ವತಿ, ನಾರದಮುನಿ ವಿನುತೆ, ಜ್ಞಾನವರದ ಚರಿತೆ. ಅಂಥಹ ಸಂಗೀತ ರಸಿಕೆ, ಸುಗುಣಾಲಯೆಯನ್ನು ಕಲ್ಯಾಣಿರಾಗದಲ್ಲಿ ಊತ್ತ್‌ಕ್ಕಾಡ್ ವೇಂಕಟ ಸುಬ್ರಹ್ಮಣ್ಯಐಯ್ಯರ್ ಪೂಜಿಸಿದ್ದಾರೆ.

'ಸಂಗೀತರಸಿಕೆ - ಸುಗುಣಾಲಯೆ'

೪. ಯಾವದೇವಿ ಎಲ್ಲ ಪಂಚಭೂತಗಳಲ್ಲೂ ಶಕ್ತಿ ರೂಪಿಣಿಯಾಗಿ ಇದ್ದು ನಮ್ಮನ್ನು ಕಾಪಾಡುವಳೋ ಆ ದುರ್ಗಾಮಾತೆಗೆ ಈಗ ನಾದನಮನ. ಈ ಖ್ಯಾತ ಶರಣಾಗತಿ, ದುರ್ಗಾರಾಗದಲ್ಲೇ 'ಜಯದುರ್ಗೆಗೆ ಅರ್ಪಣೆ. ಇದು ಶ್ರೀ ಬ್ರಹ್ಮಾನಂದರ ಭಜನೆ-

೫. ಸಂಗೀತ ತ್ರಿಮೂರ್ತಿಗಳಲ್ಲಿ ಒಬ್ಬರಾದ ನಾದಯೋಗಿ ಮುತ್ತುಸ್ವಾಮಿ ದೀಕ್ಷಿತರು ಖ್ಯಾತ ವೈಣಿಕರು. ಕಾರ್ತಿಕೇಯನ ಅಂಶಜರು. ಅವರ ಕೃತಿಗಳು ಅದ್ಭುತ ಧ್ಯಾನ ಶ್ಲೋಕಗಳು. ಭಕ್ತಿ ಭಂಡಾರ. ಪಾಪಶಮನಿ, ಪದ್ಮನಾಭಹೃದಯ ಸ್ಥಿರವಾಸಿನಿಯಾಗಿ ಶ್ರಾವಣ ಪೌರ್ಣಮಿ ಪೂಜಾವಾ

ಷಿನಿಯಾಗಿರುವ, ವಾರಾಹಿ, ವೈಷ್ಣವಿ ಮುಂತಾದ ರೂಪಧರಿಸಿರುವ ಜಯಲಕ್ಷ್ಮಿಗೆ ಹಿಂದೋಳ ರಾಗದಲ್ಲಿ ದಿವ್ಯವಾದ ಅರ್ಚನೆ, ದೀಕ್ಷಿತರಿಂದ. ವೈಣಿಕ ವಿದ್ವಾನ್ ಡಾ|| ಎಸ್. ರಾಮನಾಥನ್ ಅವರು ರಾಗ ಸಂಯೋಗಿಸಿದ್ದಾರೆ. ಋಗ್ವೇದದಲ್ಲೂ ಈ ಸಿದ್ಧಿಲಕ್ಷ್ಮಿಯ ಸ್ತುತಿ ಮೂಡಿಬಂದಿದೆ.

'ಮಾತಾ ಸರ್ವಸ್ಯಲೋಕಸ್ಯ
ಮಧುಸೂದನ ಮಾಲಿನೀಂ
ದರವೀಂ ಆದಾಯ ಬಾಲಸ್ಯ
ದದೌ ಭಿಕ್ಷಾಂ ಗೃಹೇ ಗೃಹೇ'

ಇದು ಮನೆ ಮನೆಯಲ್ಲೂ ತಾಯಿಯಾಗಿ ಬಂದು ಇಂದೂ ಬಾಲಕರ ಮನ- ಮನದಲ್ಲೂ ಹರಸುವ ಮೇಲುಕೋಟೆ ಶ್ರೀ ಯದುಗಿರಿ ಮಾತೆಯ ಧ್ಯಾನಶ್ಲೋಕ. ಅಂತೆಯೇ ಈ ಮಹಾಲಕ್ಷ್ಮಿಯನ್ನು ಸಂಗೀತ ತ್ರಿಮೂರ್ತಿಗಳಲ್ಲಿ ಮತ್ತೊಬ್ಬರಾದ ಶ್ಯಾಮಾಶಾಸ್ತ್ರಿಗಳು ಪೂರ್ತಿ ಶರಣಾಗಿ 'ಹೇ! ತ್ರಿಲೋಕ ಜನನಿ, ವನಜಾಯತ ನೇತ್ರೆ, ಸರಸೀರುಹ ಲೋಚನಿ, ಸುವಾಸಿನಿ, ಮನಸಿಜ ಮಾನಸ ಸಂಮೋದಿನಿ, ನೀನಿಲ್ಲದೆ ನಮಗೆ ದಿಕ್ಕು ಯಾರಮ್ಮಾ' ಎಂದು ಆರ್ತರಾಗಿ ರೀತಿಗೌಳ ರಾಗದಲ್ಲಿ 'ಜನನೀ ನಿನು ವಿನಾ' ಎಂದು ಬೇಡಿದ್ದಾರೆ. ಖ್ಯಾತ ಕೃತಿ.

೭. ವಿಷ್ಣು ಚಿತ್ತಕುಲ ನಂದಿನಿ, ಶೂಡಿಕೊಡುತ್ತ ಶುಡರ್‌ಕೊಡಿ, ದೇವಿ ಆಂಡಾಳ್ ನಮಗೆ ಕಲಿಸಿದ ನಂಬಿಕೆ, ಶ್ರದ್ಧೆ ಅತಿ ಹಿರಿದು, 'ನಾರಾಯಣನೇ ನಮಕ್ಕೇ ಪರೈ ತೆರುವಾನ್'. ಅವರ ತಿರುಪ್ಪಾವೈ ಪಾಶುರಗಳು, ನಾಚ್ಚಿಯಾರ್ ತಿರುಮೊಳಿ ವಿಶ್ವವಿಖ್ಯಾತ. ಆರಭಿ, ಹಮ್ಮೀರ್‌ಕಲ್ಯಾಣಿ, ಮೋಹನ ಮುಂತಾದ ಹಲವು ರಾಗಗಳಲ್ಲಿ ಇವು ಪ್ರಾತಃಸ್ಮರಣೀಯ.

೮. ರಾಗ ಮಾಲಿಕೆಯಲ್ಲಿ ವೇಂಕಟರಮಣ ಏಯ್ಯರ್‌ರ 'ಶಿವರಾಮ ಕೃಷ್ಣಗೋವಿಂದ' ಕೃತಿ ನಮ್ಮನ್ನು ಭಾರತ ಕ್ಷೇತ್ರಾಟನೆ ಮಾಡಿಸುತ್ತದೆ. ಶ್ರೀನಿವಾಸ, ಗುರುವಾಯೂರಪ್ಪ, ಪಾಂಡುರಂಗ, ನಟರಾಜ, ಮೀನಾಕ್ಷಿ..... ಹೀಗೆ.

೯. ಕರ್ನಾಟಕಕ್ಕೂ ಭಕ್ತಿಪಂಥಕ್ಕೂ ಬಲುನೆಂಟು. ಕನಕಧಾರಾಸ್ತುತಿಯಿಂದ ಲಕ್ಷ್ಮೀದೇವಿಯನ್ನು ಭಜಿಸಿದ ಆದಿಶಂಕರರು ಪೂಜಿಸಿದ ಶೃಂಗೇರಿ ಶಾರದಾಂಬಾ ವರಪ್ರದಾಯಿನಿ, ಕಾರುಣ್ಯವಾರಾನಿಧಿ, ಕಲ್ಪವಲ್ಲಿ, ಮೋಹಾಂಧಕಾರವನ್ನು ಹೋಗಲಾಡಿಸುವವಳು. ಕಮಾಚ್‌ರಾಗದಲ್ಲಿ ಶ್ರೀ ಭಾರತೀತೀರ್ಥರು ಮಾತೆಯನ್ನು 'ಶ್ರೀ ಶಾರದಾಂಬಾ ಭಜೇ' ಎಂದೇ ಸ್ತುತಿಸಿದ್ದಾರೆ.

೧೦. ತಾಯಿ ವಿಶಾಲಾಕ್ಷಿ, ತ್ರಿಪುರಸುಂದರಿ. ವೇದ ಶಾಸ್ತ್ರ ವಿಶ್ವಾಸಿನಿ. ಪಾಯಸಾನ್ನ ಪೂರಿತೆ. ಶ್ರೀ ಅನ್ನಪೂರ್ಣಾದೇವಿಯನ್ನು ಮುತ್ತುಸ್ವಾಮಿ ದೀಕ್ಷಿತರು ಅತ್ಯಂತ ಹೃದಯಂಗಮವಾಗಿ ಸಾಮರಾಗದಲ್ಲಿ 'ಅನ್ನಪೂರ್ಣೆ ವಿಶಾಲಾಕ್ಷಿ' 'ಪಿಂಕ್ಷಾಂಗಿ' 'ದುರಿತಾರ್ಥ ನಿವಾರಣೆ' ಮೋಕ್ಷಪ್ರದ ಚರಿತೆ - ಎಂದೆಲ್ಲ ಸ್ತುತಿಸಿದ್ದಾರೆ.

೧೧. ತಾಯಿ ಕರುಣಾಪೂರ್ಣೆ. ನಮ್ಮ ತಪ್ಪನ್ನು ಕ್ಷಮಿಸಿ, ಶರಣಾಗತರನ್ನು ರಕ್ಷಿಸಲು ಭಗವಂತನಲ್ಲಿ ನಮಗಾಗಿ ಮೊರೆಯಿಡುವ ಕರುಣೈದೈವ. ತಂಜಾವೂರು ಶಂಕರ ಐಯ್ಯರ್ ಜತೆ ಸಿಂಧುಭೈರವಿಯನ್ನು ನಾವೂ ನಮಿಸೋಣ.

೧೨. ವಿದ್ವಾನ್ ಮಹಾರಾಜಪುರಂ ಸಂತಾನಂ ಸ್ವರ ಸಂಯೋಜನೆ ಮಾಡಿದ ಅಪೂರ್ವರಾಗ ಮಾಲಿಕೆ, ಶಂಕರ ಐಯ್ಯರ್ ವಿರಚಿತ 'ಶ್ರೀ ಚಕ್ರರಾಜ ಸಿಂಹಾಸನೇಶ್ವರಿ' ಬಹುಜನಪ್ರಿಯಕೃತಿ. ಈ ರಾಜರಾಜೇಶ್ವರಿ, ಕಂಚಿಕಾಮೇಶ್ವರಿ, ನಟರಾಜ ಮನೋಹರಿಯನ್ನು ಝುಂಝುಟಿ, ಪುನ್ನಾಗವರಾಳಿ, ನಾದನಾಮಕ್ರಿಯಾ, ಸಿಂಧುಭೈರವಿಗಳಲ್ಲಿ 'ಅಡ್ಕೈಕ್ಕಲಮ್ ನೀಯೇ ಅಮ್ಮಾ!' ಎಂದು ಶರಣಾಗತಿಯ ಜೀವನ ಮಾರ್ಗವನ್ನು ತೋರಿಸಿದ್ದಾರೆ.

೧೩. ಸಂಗೀತ ತ್ರಿಮೂರ್ತಿಗಳಲ್ಲಿ ನಾದಬ್ರಹ್ಮ ತ್ಯಾಗರಾಜಸ್ವಾಮಿಗಳು ಸದಾ ಪ್ರಾತಃಸ್ಮರಣೀಯರು. ಅವರು ರಚಿಸಿರುವ ಅಪೂರ್ವ ಕೃತಿ, ಯಮನ್ ಕಲ್ಯಾಣಿಯ ಶ್ರೀ ನಾರಾಯಣಾಹರಿ.

೧೪. ಕರ್ನಾಟಕ ಸಂಗೀತಕ್ಕೇ ಪಿತಾಮಹ ಎನ್ನಿಸಿಕೊಂಡು ಸಂಗೀತ ಶಿಕ್ಷಣರಕ್ಷಣ ಮಾಡಿ ಜನರಿಗೆಲ್ಲಾ ಶ್ರೀಕೃಷ್ಣನನ್ನು ನೀಡಿದ ದಾಸವರೇಣ್ಯ ಪುರಂದರದಾಸರು ಮಾತೆಲಕ್ಷ್ಮಿಯನ್ನು ಹಲವು ರೀತಿ ಸ್ತುತಿಸಿ ಧನ್ಯರಾಗಿದ್ದಾರೆ. ಬಹು ಜನಪ್ರಿಯ ಕೃತಿ ಶ್ರೀರಾಗದಲ್ಲಿ 'ಭಾಗ್ಯಾದ ಲಕ್ಷ್ಮೀ ಬಾರಮ್ಮಾ ನಮ್ಮಮ್ಮ ನೀ ಸೌಭಾಗ್ಯಾದ ಲಕ್ಷ್ಮೀ ಬಾರಮ್ಮಾ'

ಭಾರತನಾರಿಗೆ ಸ್ಫೂರ್ತಿದೇವಿಯಾಗಿರುವ ಲಕ್ಷ್ಮೀ - ಸರಸ್ವತೀ - ಪಾರ್ವತಿ ಮುಂತಾದ ಹಲವು ರೂಪಧಾರಿಣಿಯಾಗಿ ದುಷ್ಟ ಶಿಕ್ಷಣ, ಶಿಷ್ಟರಕ್ಷಣ ಧರ್ಮಸಂಸ್ಥಾಪನೆಯಲ್ಲಿ ದೇವನಿಗೆ ಸಹಾಯಮಾಡುವ ಆ ಮಾತೆಗೆ ಇದೋ ನಾದನಮನ.



## ತಿರುಮಲೆ ತಿರುಪತಿ ದೇವಸ್ಥಾನಗಳು -- ತಿರುಪತಿ.



# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ



ತರುವೊಂದ ಬೆಳೆವವನು ದೇವರಾ ಸೇವಕನು
ಹರಿವನವ ತಲೆಮಾರುಗಳಿಗೆಲ್ಲ ಕರುಣೆಯನು
ಹರಸುವರು ಅವನ, ಜನ, ಅವನೆಂದು ನೋಡದವರು



ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿ ತನ್ನ ಭಕ್ತರಿಗೆಂದೇ ನೀಡಿದ ಪ್ರಶಸ್ತ ವರವಾಗಿದೆ. ದೇವರು ಸ್ವಯಂವ್ಯಕ್ತನಾದ ತಿರುಮಲೆಯ ಪವಿತ್ರ ಪರ್ವತದ ಅಮೂಲ್ಯವಾದ ಕಾಡುಗಳನ್ನು ಪರಿರಕ್ಷಿಸಿಕೊಳ್ಳುವ ತೀವ್ರ ಆಕಾಂಕ್ಷೆಯಿಂದ ತಿರುಮಲೆ ತಿರುಪತಿ ದೇವಸ್ಥಾನಗಳು 1981 ರಲ್ಲಿ ಜೀವ ಸೌಂದರ್ಯಯೋಜನೆಯಡಿಯಲ್ಲಿ ತಿರುಪತಿ, ತಿರುಮಲೆಗಳಲ್ಲಿ 29 ಲಕ್ಷ ಗಿಡಗಳನ್ನು ಬೆಳೆಸುವ ಮಹತ್ವಾಕಾಂಕ್ಷೆಯ ಅರಣ್ಯಾಭಿವೃದ್ಧಿ ಕ್ರಮವನ್ನು ಕೈಗೊಂಡು ಕ್ರಿಯಾಶೀಲವಾಯಿತು. ಈ ಯೋಜನೆಯ ಮೂಲ ಉದ್ದೇಶ -- ತಿರುಪತಿಯ ತಪ್ಪಲು ಪ್ರದೇಶದಲ್ಲೂ, ತಿರುಮಲೆಯ ಪರ್ವತಾವಳಿಯಲ್ಲೂ ಜೈವಿಕ ವಾತಾವರಣವನ್ನು ಪರಿರಕ್ಷಿಸಿ ಸಂವರ್ಧಿಸುವುದು.

ಈ ಯೋಜನೆಯ ಸಾಫಲ್ಯದಿಂದ ಉತ್ತೇಜಿತರಾಗಿ ಉತ್ಸಾಹಿತರಾಗಿ ತಿರುಮಲೆ ತಿರುಪತಿ ದೇವಸ್ಥಾನಗಳು ಮತ್ತೂ ಹಲವಾರು ಕಾರ್ಯಕ್ರಮಗಳನ್ನು ಅದೇ ದಿಕ್ಕಿನಲ್ಲಿ ಹಮ್ಮಿಕೊಂಡಿದೆ. ಇದರ ಹೆಸರು--

## ಶ್ರೀ ವೆಂಕಟೇಶ್ವರ ವನಾಭಿವೃದ್ಧಿಯೋಜನೆ

ತಿ. ತಿ. ದೇ. ಗಳ ಅರಣ್ಯ ವಿಭಾಗ ಹಮ್ಮಿಕೊಂಡಿರುವ ಈ ಅರಣ್ಯಾಭಿವೃದ್ಧಿ ಯೋಜನೆಯಲ್ಲಿ ಸಾರ್ವಜನಿಕರೂ ಭಾಗವಹಿಸಬಹುದಾದ ವಿಶೇಷ ಅವಕಾಶವನ್ನು ಕಲ್ಪಿಸಲಾಗಿದೆ. ಈ ಯೋಜನೆಯ ಹಲವಾರು ಪ್ರಮುಖ ವಿವರಗಳನ್ನು ಪಟ್ಟಿ ಮಾಡಲಾಗಿದೆ.

**ವೃಕ್ಷಸಂವರ್ಧನ ಯೋಜನೆ :** ರೂ.೨೫೦೦೦ - ದಾನವನ್ನು ನೀಡುವವರ ಹೆಸರಿನಲ್ಲಿ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ೫೦೦ ಸಸಿಗಳನ್ನು ತಿರುಪತಿ ತಿರುಮಲೆ ಗಳಲ್ಲಿ ನೆಟ್ಟು ಐದು ವರ್ಷ ಅವುಗಳನ್ನು ನೋಡಿಕೊಳ್ಳಲಾಗುವುದು.

**ವೃಕ್ಷಪ್ರಸಾದ :** ರೂ.೧೫೦೦೦ - ದಾನವನ್ನು ನೀಡುವವರ ಪರವಾಗಿ ತಿರುಪತಿ, ತಿರುಮಲೆಯಲ್ಲಿ ಪ್ರತಿವರ್ಷ ೧೦೦ ಫಲ, ಪುಷ್ಪ ತರುಗಳನ್ನು ಬೆಳೆಸಲಾಗುವುದು. ಹತ್ತುವರ್ಷಗಳ ಕಾಲ ದಾನಿಗಳ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ಪ್ರತಿವರ್ಷ ೧೦೦ ಹೂ ಹಣ್ಣುಗಳ ಸಸಿಗಳನ್ನು ವಿತರಿಸಲಾಗುವುದು

**ಸ್ಮಾರಕ ವನಗಳು:** ರೂ ೫೦೦೦ ದಾನ ನೀಡುವವರ ಹೆಸರಿನಲ್ಲಿ ತಿರುಪತಿ ತಿರುಮಲೆಗಳಲ್ಲಿ ಹತ್ತುಮರಗಳನ್ನು ಒಂದೆಡೆ ನೆಟ್ಟು ಐದುವರ್ಷ ನೋಡಿಕೊಳ್ಳಲಾಗುವುದು.

**ವನ ಸಂರಕ್ಷಣ ಭಾಗಸ್ವಾಮ್ಯ:** ರೂ ೨೦೦೦ ದಾನದಿಂದ ದಾನಿಗಳ ಹೆಸರನ್ನು ಹಿರಿದಾಗಿ ಪ್ರಕಟಿಸುವ ಫಲಕದೊಡನೆ ತಿರುಮಲೆಯ ವನಾಚ್ಛಾದನೆಯನ್ನು ಸಂರಕ್ಷಿಸುವ ಯೋಜನೆಯಿದು.

**ಮುಖ್ಯ ಸೂಚನೆ:-** ೧. ಈ ಎಲ್ಲ ದಾನಗಳೂ, ೩೫ ಸಿ.ಸಿ.ಬಿ ಕಲಮಿನಂತೆ ನೂರು ಶತಾಂಶ ಆದಾಯಕರ ವಿಮುಕ್ತ ವಾಗಿರುತ್ತದೆ.

೨. ಈ ಪರಿಷ್ಕರಣಗಳು ೧-೨-೯೬ ರಿಂದ ಜಾರಿಗೆ ಬಂದಿವೆ. ಅದಕ್ಕೂ ಹಿಂದೆ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯಲ್ಲಿ ಸೇರಿದವರಿಗೆ ಹಳೆಯ ಸೌಲಭ್ಯಗಳು ಮುಂದುವರೆಯುತ್ತವೆ.

ತಿರುಮಲೆಯ ಅರಣ್ಯನಮ್ಮ ಪರಂಪರೆಯ ಅವಿಭಾಜ್ಯ ಅಂಗ. ಅದನ್ನು ಸಂರಕ್ಷಿಸಿ ಸಂವರ್ಧನಗೊಳಿಸುವ.

ದಶಕೂಪ ಸಮೋವಾಪಿ ದಶ ವಾಪಿ ಸಮೋ ಹ್ರದ
ದಶಹ್ರದ ಸಮಃ ಪುತ್ರ ದಶ ಪುತ್ರ ಸಮೋ ದ್ರುಮ

ಪತ್ತು ಬಾವಿಗಳು ಒಂದು ಕೆರೆಗೂ, ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ, ಹತ್ತು ಮಕ್ಕಳು ಒಂದು ತರುವಿಗೂ ಸಮ.

ಈ ಉದಾತ್ತ ಯೋಜನೆಯಲ್ಲಿ ಪಾಲುಗೊಂಡು ಉದಾರವಾಗಿ ದಾನನೀಡಿ ತಿರುಮಲೆಯನ್ನು -- ಶ್ರೀ ವೆಂಕಟೇಶ್ವರಸ್ವಾಮಿ ನಿವಾಸವನ್ನು -- ವನಸಿರಿಯಿಂದಲೂ ಸೌಂದರ್ಯಸಿರಿಯಿಂದಲೂ ಕೂಡಿರುವಂತೆ ಮಾಡುವಲ್ಲಿ ಸಹಕರಿಸಬೇಕೆಂದು ಕೋರಲಾಗಿದೆ.



| ದಾನಗಳ ಡಿ.ಡಿ. ಯನ್ನು ತಾವು ಕಳುಹಿಸ ಬೇಕಾದ ವಿಳಾಸ: |
|---|
| ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇವಸ್ಥಾನಗಳು, ತಿರುಪತಿ. |



ಕಾರ್ಯನಿರ್ವಹಣಾಧಿಕಾರಿ

# ಗೋದಾಸ್ತುತಿ

---ಪ್ರೊ. ಸಿ. ಗೋವಿಂದಾಚಾರ್.

ಸ್ತೋತ್ರಗಳ ಮೂಲಕ ಭಗವದ್ಭಕ್ತಿಯನ್ನು ಬೆಳೆಸುವಲ್ಲಿ ವೇದಾಂತದೇಶಿಕರ ಕೊಡುಗೆ ಅಪಾರವೂ ಅದ್ವಿತೀಯವೂ ಆಗಿದೆ. ಭಕ್ತಿಪೂರ್ಣವಾದ ಹಾಗೂ ಹೃದಯಂಗಮವಾದ ಅವರ ಅನೇಕ ಸ್ತೋತ್ರಗ್ರಂಥಗಳ ಪೈಕಿ ಆಂಡಾಳ್‌ಮಾತೆಯನ್ನು ಸ್ತುತಿಸುವ 'ಗೋದಾಸ್ತುತಿ'ಯೂ ಒಂದು. ೨೯ ಪದ್ಯಗಳುಳ್ಳ ಈ ಕೃತಿಯಲ್ಲಿ ಶ್ರೀಮದಾಚಾರ್ಯರು ಗೋದಾದೇವಿಯ ಪರಿಚಯ, ಮಹಿಮೆ, ಎರಡು ಕೃತಿಗಳು, 'ಮುಡಿದುಕೊಟ್ಟ ಮಡದಿ' ಪ್ರಸಂಗವನ್ನೇ ಆಧಾರವಾಗಿಟ್ಟುಕೊಂಡು ಗೋದೆ ರಂಗನಾಥರ ಸ್ವಯಂವರ ವರ್ಣನೆಯನ್ನೂ [illegible] ಸಿರೂಪಣೆಯನ್ನೂ ಮಾ[illegible]ಸ್ತುತಿಯ[illegible] ಹೇಳಿದ್ದಾರೆ.

ಗೋದಾದೇವಿಯನ್ನು ಪರಿ[illegible]ಸುವಾಗ ಅವಳಿಗೆ ದಿವ್ಯಮಹಿಷಿಯ ಸ್ಥಾನ [illegible]ಸ್ವರೂಪ ಗುಣಗಳನ್ನು ಕೊಡುವರು. ಒಂದು ಕಡೆ ಶ್ರೀದೇವಿಯ ಕಿರುಸೋದರಿ - ಎರಡನೆ ಲಕ್ಷ್ಮೀದೇವಿ ಎಂದು ಹೇಳಿ ಮತ್ತೊಂದುಕಡೆ ಭೂದೇವಿಯ ಅಂಶವಳು - 'ಸಾಕ್ಷಾತ್ ಕ್ಷಮಾಂ ಕರುಣಯಾ' (ಗೋ.ಸ್ತು-೧) ಎಂದು ಹೇಳಿ ಉಭಯ ದೇವಿಯರ ಸಾಮ್ಯವನ್ನು ಕೊಡುವರು. ಮಹಾವಿಷ್ಣುವಿಗೆ ಆಶ್ರಯಕೊಟ್ಟ ಕ್ಷೀರಸಾಗರವು 'ವಿಷ್ಣುಚಿತ್ತ' ಎಂದೆನಿಸುವುದು. ವಿಷ್ಣುವಿನ ಮನಸ್ಸು ಅಲ್ಲಿ ನಲಿಯುವುದು. ಲಕ್ಷ್ಮೀದೇವಿಯು ಕ್ಷೀರ ಸಾಗರದಲ್ಲಿ ಜನಿಸಿರುವುದರಿಂದ



'ಅಧಿವಿಷ್ಣುಚಿತ್ತೆ'ಯಾಗಿದ್ದಾಳೆ. (ಗೋ.ಸ್ತು-೯) ಗೋದೆಯು ರೂಪದಲ್ಲಿ 'ಚಂದ್ರಮುಖಿ' ಎಂದು ಅರ್ಥೈಸಿರುತ್ತಾರೆ. 'ಚಂದ್ರಮಾ ಮನಸೋ ಜಾತಃ' ಎಂಬಂತೆ ಚಂದ್ರನು ವಿಷ್ಣುವಿನ ಮನಸ್ಸಿನಲ್ಲಿ ಹುಟ್ಟಿದವನು. ಗೋದೆಯೋ 'ವಿಷ್ಣುಚಿತ್ತ ಕುಲನಂದನ' ಎಂಬಂತೆ ವಿಷ್ಣುಚಿತ್ತರೆಂಬ ಪೆರಿ ಆಳ್ವಾರರಲ್ಲಿ ಉದಿಸಿದಳು. 'ಗೋದಾ' ಎಂಬ ಹೆಸರು ವಾಕ್ಕನ್ನು ಅನುಗ್ರಹಿಸುವವಳು ಎಂದು ಅರ್ಥ ಮಾಡಿ ಇವಳು ವಾಗ್ದೇವಿ ಎಂದು ಸಂಬೋಧಿಸಿರುತ್ತಾರೆ. ಹೂವನ್ನು ಮುಡಿದು ಕೊಟ್ಟವಳಾದ್ದರಿಂದ 'ಕೋದೈ'. ಪರಮ ಮಂಗಳ ಸ್ವರೂಪಿ, ಭಗವಂತನೊಡನೆ ನಿತ್ಯ ಯೋಗವನ್ನು ಹೊಂದಿರುವವಳು, ಪುರುಷಾಕಾರ ಭೂತಳು. ನಿಗ್ರಹವನ್ನೇ ತಿಳಿಯದವಳು, ನಯನ ಮನೋಹರಳು, ಇಂದ್ರನೀಲ ಮಣಿಯಂತೆ ಕಾಂತಿಯುಳ್ಳವಳು, ತನ್ನ ಮುಡಿಮಾಲೆಯಿಂದ ಭಗವಂತನನ್ನೇ ಆಕರ್ಷಿಸಿದ ಮಹಾನುಭಾವೆ, 'ಶತಮಖ ಮಣಿ ನೀಲಾ..... ಸಾಂದ್ರವಾತ್ಸಲ್ಯಸಿಂಧು ಅಳಕ ವಿನಿತಾಭಿಃ ಸ್ರಗ್ಭಿರಾಕೃಷ್ಟನಾಥ" (೨೮) ಎಂದು ಹೇಳಿರುತ್ತಾರೆ. ಶ್ರೀರಂಗರಾಜನೆಂಬ ಹರಿಚಂದನ ವೃಕ್ಷವನ್ನು ಎಂದೆಂದೂ ಬಳಸಿರುವ ಕಲ್ಪಲತೆಯಾಗಿದ್ದಾಳೆ. ಶ್ರೀರಂಗನ ದಯಾವರ್ಷದಿಂದ ವರ್ಧಿಸಿದ ಅಮೃತನದಿ ಇವಳು. ಭಗವಂತನ ದಯೆಯೇ ಮೂರ್ತಿವೆತ್ತಂತೆ ಇರುವಳು. ತುಂಗಭದ್ರಾ, ಸರಸ್ವತಿ, - ನರ್ಮದಾ ಮುಂತಾದ ಪುಣ್ಯನದಿಗಳ ಶ್ಲೇಷೆಯಿಂದ ಗೋದಾದೇವಿಯ ರೂಪವನ್ನು ಆಚಾರ್ಯರು ವರ್ಣಿಸುವರು.

ಇವಳ 'ತಿರುಪ್ಪಾವೈ, ನಾಚ್ಚಿಯಾರ್ ತಿರುಮೊಳಿ' ಎಂಬ ಎರಡು ಮೇರು ಕೃತಿಗಳು - 'ಪಾತಕಂಗಳ್ ತೀರ್ಕುಂ ಪರಮನಡಿಕಾಟ್ಟುಂ ..... ಇತ್ಯಾದಿಯಾಗಿ ಪರಮ ಪುರುಷಾರ್ಥ ಸಾಧನವಾಗಿ ಕೊಂಡಾಡಲ್ಪಟ್ಟಿದೆ. ಯಮುನೆಯಂತೆ ಇವುಗಳೂ ಕೂಡ ಶ್ರೀಕೃಷ್ಣನ ಸಂಬಂಧಹೊಂದಿ ಮಹಿಮಯುತವಾಗಿದೆ. ಇವೆರಡೂ ಯಮುನೆಯೋಪಾದಿಯಲ್ಲಿ ಗಾಢವಾದುವು. ಯಮುನೆಯಲ್ಲಿಳಿದು ಅವಗಾಹನ ಮಾಡಬೇಕಾದರೆ ಸ್ನಾನ ಘಟ್ಟ ಹೇಗೋ ಹಾಗೆಯೇ ಇವಳ ಕೃತಿಗಳು. ಗೂಢವೂ ಗಂಭೀರವೂ ಆದ ಭಾವಗಳನ್ನು ಅರಿಯಬೇಕು. ಗುರುಮುಖೇನ ಅಧ್ಯಯನ ಮಾಡಿ ಜ್ಞಾನಸಂಪನ್ನರಾಗಬೇಕು. ಇಂಥವರ ಮೇಲೆ ಭಗವತಿ ಕಟಾಕ್ಷಿಸುವಳು. ಕವಿಗಳಿಗೆ ಸ್ಫೂರ್ತಿಯನ್ನು ಕೊಡುವ ಕೃತಿಗಳಿವು. ಹೂಮಾಲೆ ಹಾಗೂ ಕೃತಿಗಳರೂಪದ ಪಾಮಾಲೆ - ಎರಡನ್ನೂ ಶ್ರೀರಂಗನಿಗೆ ಸಮರ್ಪಿಸಿದಳು. ಉಭಯ ವೇದಗಳಿಗೆ ಭಗವಂತನೇ ವಿಷಯವೆಂಬುದು ಇಲ್ಲಿ ಗೂಡಾರ್ಥ. ರಸಮಯವಾದ ಸೂಕ್ತಿಗಳಿಂದಲೇ ಅವನನ್ನು ವಶಪಡಿಸಿಕೊಂಡಳು. ಇವೆರಡಕ್ಕೂ ಅವನು ಮಾರುಹೋದ.

> ಕೃಷ್ಣಾನ್ವಯೇನ ದಧತೀಂ
> ಯಮುನಾನುಭಾವಂ ತೀರ್ಥೈ
> ಯಥಾವದವಗಾಹ್ಯ ಸರಸ್ವತೀಂ ತೇ
> ಗೋದೇ ವಿಕಸ್ವರಧಿಯಾಂ ಭವತಿ ಕಟಾಕ್ಷಾತ್
> ವಾಚಸ್ಫುರಂತಿ ಮಕರಂದ ಮುಚಃ ಕವೀನಾಂ"
> (ಗೋ.ಸ್ತು. ೪)

ಗೋದಾದೇವಿಯ ಮಹಿಮೆಯನ್ನು ಹೇಳುವಾಗ ಶ್ರೀಮದ್ವೆಂಕಟನಾಥರು ದಿವ್ಯ ಮಹಿಷಿಯ ಗುಣ ಸಮೂಹಕ್ಕೆ ಸಮೀಕರಿಸುವರು. ಭಗವಂತನಂತೆ ದೇವಿಯ ಮಹಿಮೆಯೂ ಕೂಡ ಮಾತಿಗೂ ಮನಸ್ಸಿಗೂ ಎಟುಕದು. ಶ್ರುತಿಗಳು 'ತೇಽಪಿಸದಾ ಸ್ತುವಂತ' ಎಂದು ಯಾಮುನರು ಹೇಳುವಂತೆ ಶ್ರೀಮನ್ನಾರಾಯಣನನ್ನು ಇನ್ನೂ ಸ್ತುತಿಸುತ್ತಲೇ ಇವೆಯಂತೆ. ಬ್ರಹ್ಮಾದಿಗಳು ಕೂಡ ದೇವಿಯ ವೈಭವಗಳಿಗೆ ಉಚಿತವಾದ ಸ್ತೋತ್ರಮಾಡಲು ಅಸಮರ್ಥರಾದರೂ, ಬಹಳ ಶ್ರಮಪಟ್ಟು ಒಂದಂಶವನ್ನು ಸ್ತುತಿಸುವವರಾಗಿದ್ದಾರೆ. ದೇವಿಯ ಕಲ್ಯಾಣ ಗುಣಗಳು ನಮ್ಮನ್ನು ಪ್ರೇರೇಪಿಸಿ, ನಮ್ಮ ಮೌನವನ್ನು ಮುರಿದು ಮಾತನಾಡುವಂತೆ ಮಾಡುತ್ತವೆ. ಇವಳು ಅವನ ಕರುಣೆ ನಮ್ಮಮೇಲೆ ಹರಿಯುವಂತೆ ಮಾಡುವಳು.

> "ವಲ್ಮೀಕತ ಶ್ರವಣತೋ ವಸುಧಾತ್ಮನಸ್ತೇ
> ಜಾತೋ ಬಭೂವ ಸಮುನಿಸಾರ್ವಭೌಮ
> ಗೋದೇ ಕಿಮದ್ಭುತ ಮಿದಂ ಯದಮಾ
> ಸ್ವದಂತೇ
> ವಕ್ತ್ರಾರಮಿದ ಮಕರಂದನಿಭಾಃ ಪ್ರಬಂಧಾಃ (೭)

ಎಂದು ತೂಪ್ಪುಲ್ ಅಮ್ಮಾನ್ ಗೋದಾ+ವಾಲ್ಮೀಕಿಗಳ ಸಾಮ್ಯವನ್ನು ನಿರೂಪಿಸುವರು. ಹುತ್ತವೇ ಭೂಮಿಯ ಕಿವಿ. ಗೋದಾದೇವಿಯು ಭೂದೇವಿಯ ಅಂಶವಾದ್ದರಿಂದ ವಾಲ್ಮೀಕಿ ಭೂದೇವಿಯ ಕಿವಿಯಿಂದ ಜನಿಸಿದಂದಾಯಿತು. ಗೋದೆಯ ಅನುಗ್ರಹದಿಂದ ವಾಲ್ಮೀಕಿಯ ವಾಣಿ ಮಧುರವಾಯಿತು. ವಾಕ್ಸುದಿವ್ಯಾಮೃತವಾಯಿತು. ಅವರ ಮಾತಿನಲ್ಲಿ ಜೇನಿನ ಹೊಳೆ ಹರಿಯುವುದು. ಇದಕ್ಕಾಗಿ ತಾನೆ ಶ್ರೀರಾಮನೇ ಅದನ್ನು ಆಲಿಸಲು ಇಚ್ಛೆಪಟ್ಟ! ಆಳ್ವಾರುಗಳು ಭಗವದನುಭವ ಹೊಂದುವುದರಲ್ಲಿ ಹೀಗೆ ಗೋದೆಯ ಆದರ್ಶವನ್ನನುಸರಿಸಿದರು ಎಂಬುದನ್ನು ಸ್ವಾಮಿ ದೇಶಿಕನ್ "ಭೋಕ್ತುಂ ತವಪ್ರಿಯ ಭವತೀವಗೋದೇ" (೮) - ಎಂದು ಹೇಳಿ ಗೋದೆಗೆ ಸರ್ವೋತ್ಕರ್ಷೆಯನ್ನು ಕೊಡು

ವರು. ಆಳ್ವಾರುಗಳ ಪೈಕಿ ಇವಳಿಗೆ ಹಿರಿಮೆ ಎಂಬುದು ಈ ವಾಕ್ಯದಲ್ಲಿ ಉಕ್ತವಾಗಿದೆ. ಗೋದೆ ತನ್ನ ಸಹಜ ಸ್ತ್ರೀ ಭಾವನೆಯಿಂದ ಮಧುರ ಪ್ರೇಮವನ್ನು ನಾಯಕನಾದ ಶ್ರೀರಂಗನಲ್ಲಿ ಸಮರ್ಪಿಸಿ ಪರಮ ಭಕ್ತಿ ಎಂದರೇನು ಎಂಬುದನ್ನು ಲೋಕಕ್ಕೆಲ್ಲಾ ತಿಳಿಯುವಂತೆ ಮಾಡಿದಳು. ಕಲಿಯನ್ ಪರಕಾಲನಾಯಕಿಯಾಗಿಯೂ, ಮಾರನ್ ಪರಾಂಕುಶನಾಯಕಿಯಾಗಿ ವಿರಹಾವಸ್ಥೆಯನ್ನು ತೋಡಿಕೊಂಡು ಭಗವದನುಭವವನ್ನು ಪಡೆಯಲು ವಿಶ್ವಪ್ರಯತ್ನಪಟ್ಟಿರುತ್ತಾರೆ. ಇವಳ ಪಿತೃವೋ ವಾತ್ಸಲ್ಯ ಭಾವದಲ್ಲಿ ಕೃಷ್ಣಾಮೃತವನ್ನು ಅನುಭವಿಸಿದ್ದಾರೆ. ಇವಳಿಂದಲೇ ಅವರಿಗೆ ಮಹಿಮೆ ಉಂಟಾಯಿತು. ಅವರು ಹಾಡಿದ ಸ್ತುತಿಗಳಿಗೆ ಭಗವಂತನು ವಶನಾಗಲಿಲ್ಲ. ಕುವರಿಯಾದ ಗೋದೆಯು ಸಮರ್ಪಿಸಿದ ಹೂಮಾಲೆಗೆ ಮನಸೋತ. ಪುಷ್ಪ ಕೈಂಕರ್ಯಪರರಾದ ಆಳ್ವಾರರ ಮೇಲೆ ಪ್ರಸನ್ನನಾದ. ಭಗವಂತನಿಗೆ ಮಾವ ಆಗಿ ಪೆರಿ ಆಳ್ವಾರರಾದರು. "ಶ್ವಶುರ ಮಮರವಂದ್ಯಂ ರಂಗನಾಥಸ್ಯ".

'ಅಣಿಪ್ರದುವೈ' ಎಂಬಂತೆ ಭೂಮಿಗೇ ಭೂಷಣವಾದ ಇವಳ ಹುಟ್ಟೂರಾದ ಶ್ರೀವಿಲ್ಲಿಪುತ್ತೂರ್ ದಕ್ಷಿಣ ಭಾರತದ ಪಾಂಡ್ಯದೇಶದಲ್ಲಿರುವ ದಿವ್ಯ ಕ್ಷೇತ್ರ. ಇವಳ ಅವತಾರದಿಂದ ದಕ್ಷಿಣ ದಿಕ್ಕೇ ಪವಿತ್ರವಾಯಿತು. "ದಿಗ್ದಕ್ಷಿಣಾಪಿ ಪರಿಪಕ್ತ್ರಿಮ ಪುಣ್ಯಲಾಭಾತ್ ಸರ್ವೋತ್ತರಾಭವತಿ" (೧೧) ಲಂಕೆಯಲ್ಲಿರುವ ವಿಭೀಷಣನನ್ನು ರಕ್ಷಿಸಲು ಭಗವಂತನು ದಕ್ಷಿಣ ದಿಕ್ಕನ್ನೇ ನೋಡುತ್ತಿರುವನು ಎಂದು ಶ್ರೀರಂಗ ಮಹಾತ್ಮೆಯಲ್ಲಿಯೂ ಹಾಗೂ ಪೆರಿಯಾಳ್ವಾರರ ಸೂಕ್ತಿಗಳಲ್ಲಿಯೂ ಉಕ್ತವಾಗಿದೆ. ಈ ವಿಷಯವನ್ನು ನಿಗಮಾಂತದೇಶಿಕರು 'ತನ್ನ ಮಹಿಷಿಯಾದ ಗೋದೆ ಇರುವ ದಿಕ್ಕನ್ನೇ ನೋಡುತ್ತಿದ್ದಾನೆ' ಎಂದು ಮನೋಜ್ಞವಾಗಿಯೂ ಚಮತ್ಕಾರವಾಗಿಯೂ ವರ್ಣಿಸಿರುತ್ತಾರೆ.

ಪುಣ್ಯನದಿ 'ಗೋದಾವರಿ' ಪದದಲ್ಲಿ ಮೊದಲೆರಡಕ್ಷರದಿಂದಲೇ ನದಿಯ ಪವಿತ್ರತೆ ಹಾಗೂ ಮಹಿಮೆ ಹೆಚ್ಚಿತು - 'ಗೋದಾವರೀ ಜಗದಿದಂ ಪಯಸಾ ಪುನೀತೇ' (೧೨) ಎಂದು ಹೇಳುತ್ತಾರೆ. ಇವಳ ಮಹಿಮೆಗೆ ಒಳಗಾಗದವರಿಲ್ಲ. ಶ್ರೀರಂಗನಾಥನು ಇವಳ ಮಹಿಮೆಯಿಂದಲೇ ಹೆಚ್ಚುಕಾಂತಿಯುತನಾದ. ಕವಿ ಸಿಂಹರು ಇಲ್ಲಿ ಗೋದಾಸ್ವಯಂವರವನ್ನು ಅದ್ಭುತವಾಗಿ ವಿವರಿಸುತ್ತಾರೆ. ಮದುವೆಗೊತ್ತಾದ ಕನ್ಯಾಮಣಿಗೆ ಹೇಗೆ ಅವಳ ಗೆಳತಿಯರು ಹಾಸ್ಯಮಾಡಿ ಆನಂದಿಸುವರೋ ಹಾಗೆಯೇ ಗೋದೆಯ ಗೆಳತಿಯರು "ಏನೇ ಆಂಡಾಳ್ ನೀನು ಆರಿಸಿಕೊಂಡಿರುವವನು ನಿನಗೆ ಸರಿಸಮಾನನೇ? ಅವನಿಗೆ ಹಾಸಿಗೆ ಯಾವರೂ ಇದೆಯಾ? ಇಲ್ಲ ಹಾವೇ ಹಾಸಿಗೆ. ಒಳ್ಳೆ ವಾಹನವಾದರೂ ಇದೆಯಾ? ಇಲ್ಲ. ಪಕ್ಷಿಯೇ ವಾಹನ. ಹೋಗಲಿ ಯುವಕನೇ? ಇಲ್ಲ ಇವನಿಗಿಂತಾ ಪುರಾತನನು ಯಾರೂ ಇಲ್ಲ (೧೩) ಎಂದು ಪರಿಹಾಸ್ಯ ಮಾಡುವರು. ಇವಳು ಸಮರ್ಪಿಸಿದ ಹೂಮಾಲೆಯಿಂದ ಅವನ ಮುಖ ಮಂಡಲವು ಚೆಲುವಾಗಿ ಕಂಡಿತಲ್ಲದೆ ವಕ್ಷಸ್ಥಳದಲ್ಲಿ ವಿರಾಜಿಸುವ ವೈಜಯಂತಿ ಮಾಲೆ ಕಳೆಗುಂದಿತು. ಪ್ರಿಯಳೂ ಅನುರಾಗಳೂ ಆದ ದೇವಿಯೊಬ್ಬಳು ಮತ್ತೊಬ್ಬ ದೇವಿಯಿಂದ ಕಡಿಮೆಯಾದಳು. "ಮೌಳಿಸ್ರಜಾ ತವ ಮುಕುಂದ ಕಿರೀಟಭಾಜಾ ಗೋದೇ ಭವತ್ಯಧರಿತಾ ಖಲು ವೈಜಯಂತಿ" (೧೪)

ದುಂಬಿಗಳು ವನಮಾಲೆಯನ್ನು ಬಿಟ್ಟು ಗೋದೆ ಸಮರ್ಪಿಸಿದ ಪುಷ್ಪಮಾಲೆಯನ್ನು ಸುತ್ತುವರೆದಿದ್ದನ್ನು ದೇಶಿಕರು ನವಿಲುಗರಿಯ ಛತ್ರಿಯಂತೆ ಶೋಭಿಸುತ್ತಿತ್ತು "ಬರ್ಹಾತಪತ್ರ ರುಚಿಮಾರಚಯಂತಿ ಭೃಂಗಾ" (೧೪) - ಎಂದೂ, ದುಂಬಿಗಳು ಝೇಂಕರಿಸುವುದನ್ನು ಮಂಗಳ ವಾದ್ಯದಂತಿತ್ತು, 'ಮಂಜುಸ್ವನಾ ಮಧುಲಿಹೋವಿದಧುಃ ಸ್ವಯಂತೇ ಸ್ವಯಂವರಂಕಿಮಪಿ ಮಂಗಲತೂರ್ಯಘೋಷಃ' (ಗೋ ಸ್ತು-೧೬) ಎಂದು ವರ್ಣಿಸಿರುತ್ತಾರೆ. ಈ ರೀತಿಯಾಗಿ ಉಪಚರಿಸಲ್ಪಟ್ಟ ಶ್ರೀರಂಗನಾಥನು ಚೆಲುವಾಂತ ಮದುವಣಿಗನಂತೆ ಕಾಣುತ್ತಿದ್ದ ಎಂದು ೧೪ ನೇ ಶ್ಲೋಕ ಹೇಳುವುದು. ಶ್ರೀರಂಗದ ಸಮೀಪವಿರುವ ಉರೈಯೂರ್ (ನಾಚ್ಚಿಯಾರ್‌ಕೋಯಿಲ್) ಕ್ಷೇತ್ರದ ಅಳಹಿಯ ಮಣವಾಳನ್ ಮೂರ್ತಿ ಇದಕ್ಕೆ ಒಳ್ಳೆಯ ಉದಾಹರಣೆ ಆಗಿದೆ.

ಮಾಲೆಯನ್ನು ಸಮರ್ಪಿಸುವಾಗ ಅದು ಉಪಚಾರಗಳಲ್ಲೊಂದು ಎಂಬ ಭಾವನೆ ಬರುವಹಾಗಿತ್ತು. ಆದರೆ ಅದು ಪರಮ ಪ್ರೇಮದ ಕುರುಹಾಗಿತ್ತು. "ಮಾಲಾಮಪಿತ್ವದಲಕೈರಧಿವಾಸ್ಯದತ್ತಾಂ" (೧೮) ಸರ್ವರಸನಾದ ಸ್ವಾಮಿಗೆ ಅದರ ಬಗ್ಗೆ ಸೌರಭ ಉಂಟಾಗಿ ರಸಿಸುವಂತಿತ್ತು ಆ ಮಾಲೆ. ಭಗವಂತನನ್ನು ಶ್ರುತಿ 'ಸರ್ವಗಂಧ' ಎಂದು ಕೊಂಡಾಡುವುದು. ವೇದಗಳ ಪರಿಮಳ ಸ್ವಾಮಿಯ ಪಾದಗಳನ್ನು ವ್ಯಾಪಿಸಿದೆ. ಭಗವಂತನ ದಿವ್ಯಮಂಗಳ ವಿಗ್ರಹ ಎಂದೆಂದೂ ಸೌಗಂಧ್ಯವನ್ನು ಹೊಂದಿದೆ. ಶ್ರೀದೇವಿಯ ವಕ್ಷಸ್ಥಳದ ಪರಿಮಳ ಗಂಧದಿಂದ ಅವನು ಸುಗಂಧಯುಕ್ತನಾಗಿದ್ದಾನೆ. ಇಷ್ಟೆಲ್ಲಾ ಮಹತ್ವ ಉಳ್ಳ ಆ ಸರ್ವೇಶ್ವರನೇ ತಲೆಬಾಗಿ ಗೋದೆಯ ಪುಷ್ಪಮಾಲೆಯನ್ನು ಸ್ವೀಕರಿಸಿದ. ಅದರಲ್ಲಿ ಅಷ್ಟು ಆಕರ್ಷಣೆ



ಇತ್ತು. ಅವಳು ಸಮರ್ಪಿಸಿದ ಮಾಲೆಯ ಮೇಲೆ ಅಪಾರಗೌರವವಿತ್ತು. ತನ್ನಲ್ಲಿದ್ದ ಪರಿಮಳಕ್ಕಿಂತ ಹೆಚ್ಚಿನ ಪರಿಮಳವನ್ನು ಬಯಸಿದ. ಅದ್ಭುತ ಆಮೋದವನ್ನು ಪಡೆದು ಆನಂದಿಸಿದ. "ಆಮೋದಿತೋಪಿ ನಿಗಮೈರ್ವಿಭು ರಂಘ್ರಿಯುಗ್ಮೇ ದತ್ತೇನತೇನ ಶಿರಸಾ ತವ ಮೌಳಿಮಾಲಾಮ್" (೧೭)

ಮಾಲೆ ವಿನಿಮಯಿಸುವಾಗ ದೇಶಿಕರು ವಿವಾಹ ಆಹ್ವಾನಿತರ ಅನಿಸಿಕೆಗಳನ್ನು ವರ್ಣಿಸುವರು. ಎಲ್ಲರೂ ಎವೆಯಿಕ್ಕದೆ ನೋಡುತ್ತಿದ್ದರು. ಕೆಲವರು ಶ್ರೀರಂಗನಾಥನೇ ಹೆಚ್ಚೆಂದರು. ಕೆಲವರು ಗೋದೆಯೇ ಹೆಚ್ಚೆಂದರು. ಮತ್ತೆ ಕೆಲವರು ಇಬ್ಬರೂ ಸಮ, ದಿವ್ಯದಂಪತಿಗಳೆಂದು ಸಮಾಧಾನ ಹೇಳಿದರು (೨೦). ಗೋದಾದೇವಿ ಶ್ರೀರಂಗನ ಸಮೀಪವಿರುವಾಗ ಅವನ ದೇಹಕಾಂತಿ ತೇಜಸ್ಸು ಹೊಮ್ಮಿತು ಎಂದು ೨೩ ನೆ ಪದ್ಯದಲ್ಲಿ ವರ್ಣಿಸಿರುತ್ತಾರೆ. ಇವನು ನೀಲಮೇಘಶ್ಯಾಮ, ಗೋದೆಯೋ 'ದುರ್ವಾದಳಪ್ರತಿಮಯ' (೨೩) ಎಂಬಂತೆ ಹುಲ್ಲಿನ ಎಸಳಿನ ಮೈಬಣ್ಣ ಉಳ್ಳವಳು. ಮತ್ತೊಂದು ಪಾರ್ಶ್ವದಲ್ಲಿ 'ಹಿರಣ್ಯವರ್ಣಾಂ' ಎಂಬಂತೆ ಶ್ರೀದೇವಿ ಇದ್ದಾಳೆ. ಭಗವಂತನು ಉಭಯದೇವಿಯರ ಮಧ್ಯೆ ಹೇಗೆ ಮೆರೆಯುವನು ಎಂದು ವರ್ಣಿಸಿ ಗೋದಾ - ಶ್ರೀರಂಗನಾಥರಿಬ್ಬರೂ ಪರಸ್ಪರ ಯೋಗದಿಂದ ಶೋಭಿಸುತ್ತಿದ್ದರು ಎಂದು ಕವಿಸಿಂಹರು ಹೇಳುವರು.

ಭಗವಂತನಿಂದ ನಾವು ಏನನ್ನು ಪಡೆಯಬೇಕು, ಅವನಲ್ಲಿ ಏನನ್ನು ಪ್ರಾರ್ಥಿಸಬೇಕು ಎಂಬುದರ ಬಗ್ಗೆ ಹಾಗೂ ಸ್ತೋತ್ರಮಾಡುವ ಜಿಜ್ಞಾಸುಗಳಿಗೆ ನಿಗ ಮಾಂತಾಚಾರ್ಯರು ಸಲಹೆ ಕೊಡುವರು. ಸ್ತೋತ್ರ ಹೇಗಿರಬೇಕೆಂದರೆ ಪ್ರಸನ್ನವೂ, ಮಧುರವೂ, ಸುಂದ ರವೂ ಆಗಿ ದೇವಿಯ ಕಾಲಂದುಗೆಯ ಮಂಜು ಳನಾದವಂತೆ ಇರಬೇಕು. ದೇವಿಯನ್ನು ಸ್ತುತಿ ಸಲು ತಕ್ಕವಾಗಿರಬೇಕು. ಇಂಥಾ ಮಧುರವಾ ಣಿಯನ್ನೇ ನಾವು ಆಶಿಸಬೇಕು. "ಮಣಿನೂ ಪುರ ಶಿಂಜಿತಾನಾಂ" (ಗೋ.ಸ್ತು.೩) ಸುಂದರವೂ ಮಧುರವು ಆದ ಭಾವಪೂರ್ಣವಾದ ವಾಕ್‌ಶಕ್ತಿ ಯನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಬೇಕು. ಗೋದಾದೇವಿಯು ತನ್ನ ದಿವ್ಯಮಂಗಳರೂಪದಲ್ಲಿ ನಮ್ಮ ಹೃದಯದಲ್ಲಿ ಪ್ರಕಾಶಿಸಲಿ, ನಮ್ಮ ಧ್ಯಾನದಲ್ಲಿ ಎಂದೆಂದೂ ಗೋಚರಿಸುವಂತಾಗಲಿ, ದೇವಿಯು ನಮ್ಮನು ರಕ್ಷಿಸಲಿ ಎಂದು ಪ್ರಾರ್ಥಿಸಬೇಕು. ಅಪರಾ ಧಮಾಡವವರ ರಕ್ಷಣೆ ಹೆಚ್ಚಲ್ಲ. ಎಷ್ಟೇ ತಪ್ಪುಮಾ ಡಿದರೂ ಮಾತೆಯು ಕ್ಷಮಿಸುವಂತೆ ನಮ್ಮ ರಕ್ಷಣೆ ಗಾಗಿ ನಾವು ಕ್ಷಮಾಶಿಲವತಿಯಾದ ಗೋದೆಯನ್ನು ಪ್ರಾರ್ಥಿಸಬೇಕು ಎಂದು ಹೇಳಿದ್ದಾರೆ (೨೪).

ಕೃತಿಯುದ್ದಕ್ಕೂ ಶ್ರೀಮದಾಚಾರ್ಯರು ಸಿದ್ಧಾಂತ ನಿರೂಪಣೆಯನ್ನು ಒಂದಲ್ಲ ಒಂದು ರೀತಿ ಪ್ರತ್ಯಕ್ಷ ವಾಗಿಯೋ ಪರೋಕ್ಷವಾಗಿಯೋ ಮಾಡಿರುತ್ತಾರೆ. ಪ್ರಾರಂಭಶ್ಲೋಕದಲ್ಲೇ ಶರಣಾಗತಿಯನ್ನು ಸೂಚಿ ಸುವ 'ಪ್ರಪದ್ಯೇ' ಎಂಬ ದಿವ್ಯಪದವನ್ನು ಬಳಸಿ ದೇಶಿ ಕರು ತಾವೇ ಪ್ರಥಮವಾಗಿ ಗೋದಾದೇವಿಯಲ್ಲಿ ಶರಣರಾಗಿ ಆದರ್ಶ ತೋರಿದ್ದಾರೆ. "ನಮ್ಮಂಥಾ ಅಪರಾಧ ಚಕ್ರವರ್ತಿಗಳಿಗೆ ಅವನು ದಂಡಧರ ನಾಗಿದ್ದಾನೆ. ಭಗವಂತನ ನಿಗ್ರಹ ತಪ್ಪಿ ಅನು ಗ್ರಹ ಉಂಟಾಗಲು ಗೋದಾಮಾತೆಯ ಕರು ಣೆಯೇ ಕಾರಣ. ಅಪರಾಧ ಮಾಡಿದವನಿಗೂ ಹಿತವನ್ನೇ ಬಯಸುವ ಕಾರುಣ್ಯಮೂರ್ತಿಗಳ ಪೈಕಿ ಗೋದೆಯೂ ಒಬ್ಬಳು" ಎನ್ನುವರು ಕವಿತಾರ್ಕಿಕ ಸಿಂಹ. ಕ್ಷಮೆಯಲ್ಲಿ ಭೂದೇವಿಗಿಂತಲೂ ಕರುಣೆ ಯಲ್ಲಿ ಲಕ್ಷ್ಮಿಗಿಂತಲೂ ಇವಳು ವಿಲಕ್ಷಣಳು ಎಂಬು ದನ್ನು ದೇಶಿಕರು 'ಅಸ್ಮಾಂ' (೧) ನಲ್ಲಿ ಅರ್ಥೈಸಿ ದ್ದಾರೆ. ಭೂದೇವಿಯು ಚೇತನರು ಎಷ್ಟೇ ಅಪ ರಾಧಮಾಡಿದರೂ ತನ್ನ ಕ್ಷಮಾಗುಣದಿಂದ ಭಗ ವನ್ನಿಗ್ರಹವನ್ನು ವಾರಣಮಾಡುವಳು. ಶ್ರೀದೇವಿ ತನ್ನ ಕರುಣಾಗುಣದಿಂದ ಭಗವನ್ನಿಗ್ರಹವನ್ನು ವಾರ ಣಮಾಡುವಳು. ಗೋದಾದೇವಿಯು ಚೇತನರ ಅಪರಾಧಗಳನ್ನು ಭಗವಂತನ ಕಣ್ಣಿಗೇ ಬೀಳದಂತೆ ಮಾಡುವಳು. ಆದ್ದರಿಂದಲೇ ಇವಳು 'ಕ್ಷಮಾಲ ಕ್ಷ್ಮೀಪ್ರಿಯ ಸಖಿ' ಎಂದು ಪ್ರತಿಪಾದಿತಳಾಗಿದ್ದಾಳೆ. ಇವನೊಡನೆ ಉಭಯ ದೇವಿಯರು ಇದ್ದಾಗ ಚೇತ ನರು ಮಾಡುವ ಶರಣಾಗತಿ ಎಂದಿಗೂ ವಿಫಲ ವಾಗದು. ಅಂಥಾ ಅಪರಾಧಿಗಳನ್ನು ಮನ್ನಿಸಬೇ ಕೆಂದು ಒಬ್ಬಳು ಶಿಫಾರ್ಸುಮಾಡಿದಾಗ ಶ್ರೀರಂಗನಾ ಥನು ಒಪ್ಪದೆ ಮತ್ತೊಂದು ಕಡೆ ಮುಖತಿರುಗಿ ಸಿಕೊಂಡಾಗ ಗೋದಾದೇವಿಯು ಹುಬ್ಬಿನಿಂದಲೇ ಸಂಜ್ಞೆ ಮಾಡುವಳು (ಭ್ರೂಕ್ಷೇಪ -೨೫) ದೇವಿಯ ಇಚ್ಛೆಗೆ ಅನುಸಾರವಾಗಿ ಹಾಗೂ ಅವರ ಸಹಾ ಯದಿಂದ 'ಲಕ್ಷ್ಮೀಸಹಾಯವಾನ್ ಪ್ರಭು'ವಾದ ಭಗ ವಂತನು ಲೀಲಾವ್ಯಾಪಾರವನ್ನು ಮಾಡುವನು ಎಂಬುದೇ ಇಲ್ಲಿ ಧ್ವನಿ. ಮನುಬ್ರಹ್ಮಾದಿಗಳೂ ಇವಳ ಕೃಪೆಯಿಂದ ಪರಮಪದಪ್ರಾಪ್ತಿಯನ್ನು ಹೊಂದು ವವರಾಗಿದ್ದಾರೆ. ಆದ್ದರಿಂದ ಗೋದಾದೇವಿಗೂ ಲಕ್ಷ್ಮಿಯಂತೆ ಅಖಿಲಹೇಯಪ್ರತ್ಯನೀಕತ್ವ, ಕಲ್ಯಾಣ ಗುಣಾಕಾರತ್ವವನ್ನು ಹೇಳಿದೆ. 'ಯೋಗದ್ರಷ್ಟಾ' ಎಂಬುದು ಗೋದೆಯ ಸೌಭಾಗ್ಯಾತಿಶಯವನ್ನು ಸೂಚಿಸುವುದು. ವಿಷ್ಣುಚಿತ್ತಕುಲ ಎಂಬುದು ಪರ ಮೈಕಾಂತಿಗಳ ಕುಲ. ಈ ಕುಲದ ಗೋದಾದೇವಿ ಎಂಬ 'ಶ್ರೀ' ಪರಮಪುರುಷಾರ್ಥವಾದ ಮುಕ್ತೈಶ್ವ ರ್ಯವನ್ನೇ ಕೊಡುವ ಕಲ್ಪತರುವಾಗಿದೆ. 'ಕಲ್ಪ ವಲ್ಲೀಂ' ಎಂಬುದು ಸರ್ವಸ್ವಾತಂತ್ರವನ್ನು ಸೂಚಿಸು ವುದು ಎಂದು ಹೇಳಿ ಪ್ರಪತ್ತಿಶಾಸ್ತ್ರಪ್ರತಿಪಾದಕರಾದ ದೇಶಿಕರು ಸಿದ್ಧಾಂತವನ್ನು ಬಲಗೊಳಿಸಿ ಪರಿಷ್ಕರಿಸಿ ಸಮೃದ್ಧವಾಗಿ ಬೆಳೆಸುವಲ್ಲಿ ಮಹದುಪಕಾರ ಮಾಡಿ ರುತ್ತಾರೆ.

## ಫಲಶ್ರುತಿ :

ಭಕ್ತ ವೃಂದಕ್ಕೆ ಅರ್ಥಜ್ಞಾನವಿಲ್ಲದಿದ್ದರೂ ಕೇವಲ ಪಠಣ ಮಾತ್ರದಿಂದ ಆನಂದವನ್ನೂ ಭಗವದ್ಭ ಕ್ತಿಯನ್ನುಂಟುಮಾಡುವಲ್ಲಿ ಮಹತ್ತಾದ ಫಲವನ್ನು ನೀಡುವ ಅಪೂರ್ವ ಶಕ್ತಿಯನ್ನೊಳಗೊಂಡದ್ದು ಈ ಸ್ತೋತ್ರ. ಅರ್ಥವಾಗದಿದ್ದರೂ ಸರಿ ಸುಮ್ಮನೆ ಹೇಳಿದರೂ ಸಾಕು ಪರಮ ಪ್ರಯೋಜನಕಾರಿಯಾ ಗಿದೆ. ಈ ಅಂಶವನ್ನು ದೇಶಿಕಾಚಾರ್ಯರು 'ವಕ್ತಿ' ಎಂದು (೨೯) ಹೇಳಿರುತ್ತಾರೆ. ಸಿದ್ಧಾಂತ ಸಂಪ್ರದಾಯ ಪರಿಚಯವನ್ನು ಸುಲಭವಾಗಿ ಮಾಡಿ ಕೊಳ್ಳಬಹುದು. ಈ ಸ್ತೋತ್ರವನ್ನು ಪಠಿಸು ವವರಿಗೆ ಶ್ರೀರಂಗನಾಥನ ಪದಕಮಲ ಸೇವೆಯ ಭಾಗ್ಯ ಒದಗುವುದು. ಏಕೆಂದರೆ ತನ್ನ ವಲ್ಲಭೆ ಯನ್ನು ಸ್ತುತಿಸಿದರೆ ಭಗವಂತನು ಸುಪ್ರೀತನಾಗು ವನು. ಲೋಕಮಾತೆಯಾದ ಗೋದೆಯ ಕಲ್ಯಾಣ ಗುಣಗಳನ್ನು ಅನುಗ್ರಹಿಸಿ, ಸಂಸಾರ ಬಂಧನದಿಂದ ಬಿಡಿಸಿ ನಿತ್ಯಕೈಂಕರ್ಯದ ಪರಮಾನಂದವನ್ನುಂಟು ಮಾಡುವನು ಎಂದು ಹೇಳಿ ವೇದಾಂತಾಚಾರ್ಯ ಶ್ರೀಮದ್ವೇಂಕಟನಾಥರು ಈ ಸ್ತೋತ್ರವನ್ನು ಮುಗಿ ಸುವರು. ಇಂಥಾ ಕೃತಿಗಳಿಂದ ಎಲ್ಲ ಭಗವದ್ಭಕ್ತರು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಪ್ರಭಾವಿ ತರಾಗುವುದರಲ್ಲಿ ಸಂದೇಹವೇ ಇಲ್ಲ.

ಗೋದಾಮಾತೆಯಡಿದಾವರೆಗಳಲ್ಲಿ ಶರಣು



# ಸುಬ್ರಹ್ಮಣ್ಯ ಆರಾಧನೆ

---ಅನಂತ ಚಿಂತಾಮಣಿ ಜೋತಿಷೀ.

ಸುಬ್ರಹ್ಮಣ್ಯನ ಆರಾಧನೆಯು ಪ್ರಾಚೀನ ಕಾಲದಿಂದ ಇಡೀ ಭಾರತದಲ್ಲಿ ಪ್ರಚಲಿತವಾಗಿದೆ. ಉತ್ತರ ಭಾರತದಲ್ಲಿ ಬ್ರಹ್ಮಚಾರಿ ಕಾರ್ತಿಕೇಯನ ಹೆಸರಿನಿಂದ ನಡೆದರೆ ದಕ್ಷಿಣಭಾರತದ ತಮಿಳು ನಾಡಿನಲ್ಲಿ ಎರಡು ದೇವಿಯರ ಪತಿ ಸುಬ್ರಹ್ಮಣ್ಯ (ಮರುಗನ್) ಹೆಸರಿನಿಂದ ಆರಾಧನೆ ನಡೆಯುತ್ತಿದೆ. ಇವನ ಉಪಸನಾ ಪದ್ಧತಿಯನ್ನು ಕೌಮಾರಮ್ ಎಂದು ಕರೆಯುವರು. ತಮಿಳದಲ್ಲಿ ಮುರುಗನ್ ಎಂದು ಕರೆಯುವರು ಮುರುಗ ಎಂದರೆ ಸೌಂದರ್ಯಸೌರಭಮಾದುರ್ಯಾಹಿವ್ಯತೆ ಅನಂತ ಎಂಬರ್ಥ.

ಸುಬ್ರಹ್ಮಣ್ಯನು ಜ್ಞಾನದ ಮೂರ್ತಿಯಾಗಿರುವನು. ಆತನು ತನ್ನ ತಂದೆ ಶಿವನಿಗೆ ಪ್ರಣವ ಮಂತ್ರ ರಹಸ್ಯವನ್ನು ಉಪದೇಶಿಸಿದ್ದನು. ತಮಿಳರು ತಗಪ್ಪನ ಸ್ವಾಮಿ ಎಂದು ಕರೆಯುವರು. ಷಣ್ಮುಖನ ರೂಪದಲ್ಲಿ ಸುಬ್ರಹ್ಮಣ್ಯನ ಆರಾಧನೆ ನಡೆಯುತ್ತಿದೆ. ಕೃತ್ತಿಕಾ ಮಾತೆಯ ದಯದಿಂದ ಪಾರ್ವತಿಯ ಷಣ್ಮುಖಗಳುಳ್ಳ ಒಂದು ದೇಹವನ್ನು ರಚಿಸಿದಳು. ಇವನನ್ನು ಭಕ್ತರು ಪರಮಾರಾಧ್ಯ ಎಂದು ಭಾವಿಸಿದರು. ಸನತ್ಕುಮಾರ ನಾರದ ಅಗಸ್ತ್ಯ ಬ್ರಹ್ಮ ಇಂದ್ರ ಸರಸ್ವತಿಯರು ಗಂಧ ಮಾದನ ಪರ್ವತದ ಮೇಲೆ ಭಗವಾನ್ ಸ್ಕಂದನ ದರ್ಶನ ಮಾಡಿ ಅವನಿಂದ ಷಡಕ್ಷರ ಮಂತ್ರದ ಉಪದೇಶ ಪಡೆಯಲು ಬಂದರು. ಆಗ ಷಡಕ್ಷರ ತತ್ವವನ್ನೂ ಈ ಷಡ್ ವಿಭೂತಿಗಳನ್ನು ಒಂದೆಡೆ ಉಪದೇಶ ಮಾಡಲು ಸುಬ್ರಹ್ಮಣ್ಯನು ಷಣ್ಮುಖ ರೂಪ ಧರಿಸಿದನೆಂದು ಶಾಸ್ತ್ರಗಳು ಹೇಳುತ್ತವೆ. ಶರವಣಭವ ಈ ಷಡಕ್ಷರೀ ಮಂತ್ರದ ಅಕ್ಷರಗಳ ಮೂಲಕ ಕ್ರಮವಾಗಿ ಲಕ್ಷ್ಮೀ ವಿದ್ಯೆ ಮೋಕ್ಷ ಶತ್ರುನಾಶ ಮೃತ್ಯುಂಜಯ ನಿರೋಗತೆ ಈ ಷಟ್ ತತ್ವಗಳನ್ನು ಭೂಲೋಕದ ಮೇಲೆ ಸ್ಥಾಪಿಸುವುದಕ್ಕಾಗಿ ನಾರದಾದಿ ಶಿಷ್ಯರ ಎದುರಿಗೆ ಷಣ್ಮುಖನಾಗಿ ಭಗವಂತನು ಪ್ರತ್ಯಕ್ಷನಾದನು. ಐಶ್ವರ್ಯ ವೀರ್ಯ ಯಶ ಜ್ಞಾನ ಮತ್ತು ವೈರಾಗ್ಯ ಈ ಆರು ಭಾಗಗಳಿಂದ ಯುಕ್ತನಾಗಿದ್ದರಿಂದ ಷಡ್‌ಭಾಗಗಳ ಪ್ರತೀಕತ್ವದ ರೂಪದಲ್ಲಿ ಷಣ್ಮುಖನಾದನು. ಸುಬ್ರಹ್ಮಣ್ಯನಲ್ಲಿ ಷಡ್ ದೇವತೆಗಳ ಷಣ್ಮತಗಳ ಸಮನ್ವಯ ಕಾರಣದಿಂದ ಷಣ್ಮುಖನಾದನು. ಸುಬ್ರಹ್ಮಣ್ಯನು ಆರು ಮುಖಗಳ ಮೂಲಕ ಜ್ಞಾನ, ವರ ನೀಡುತ್ತಾನಲ್ಲದೆ ಯಜ್ಞವನ್ನು ರಕ್ಷಿಸಿ ಸಾಧು ಸಂತರಿಗೆ ವೇದ ಉಪದೇಶ ಮಾಡುವವನಲ್ಲದೇ ದುಷ್ಟರನ್ನು ನಾಶಗೈದು ಮತ್ತು ಗೃಹಸ್ಥರಿಗೆ ಧರ್ಮೋಪದೇಶ ಮಾಡುವನು.

ದೇವಸೇನಾಪತಿಯಾಗಿ ಇವನು ಸುರಪದ್ಮ ತಾರಕಾಸುರ ಮತ್ತು ಸಿಂಹಮುಖರಂಥ ರಾಕ್ಷಸರನ್ನು ಸಂಹರಿಸಿದನು. ದಕ್ಷಿಣ ಭಾರತದಲ್ಲಿಯ ಶಿಲ್ಪ ಚಿತ್ರ ಮೂರ್ತಿಗಳಲ್ಲಿ ಖಡ್ಗ ಧನುಸ್ ಬಾಣ ಪಾಶ ಅಂಕುಶ ಭಲ್ಲೆ ಮೊದಲಾದ ಆಯುಧಗಳನ್ನು ಕಾಣಬಹುದು. ಮರುಗನ ಮುಖ್ಯ ಆಯುಧವಾದ ಭಲ್ಲೆಯಾಗಿದೆ. ಸುಬ್ರಹ್ಮಣ್ಯನನ್ನು ಭಕ್ತ ಜನರು ಶಿವ ಶಕ್ತಿಯ ಐಕ್ಯ ಚಿಹ್ನೆಯೆಂದು ಮನ್ನಿಸಿ ಸ್ವತಂತ್ರ ಪೂಜೆ ಸಲ್ಲಿಸುತ್ತಾರೆ. ಸುಬ್ರಹ್ಮಣ್ಯನಿಗೆ ನವಿಲು ವಾಹನವಾಗಿದೆ. ಧ್ವಜದ ಮೇಲೆ ಕುಕ್ಕುಟದ ಅಂಕಿತವಿದೆ. ಇವೆರಡೂ ಬಿಂದು ಮತ್ತು ನಾದದ ಪ್ರತೀಕವಾಗಿವೆ. ಷಣ್ಮುಖನು ಓಂಕಾರಸ್ವರೂಪನಾಗಿರುವನು. ವೇದವೇ ಅವನ ವಾಹನ ಮಯೂರವಾಗಿದೆ. ವೇದ ಸ್ವರೂಪ ಮಯೂರ ಹಾಗೂ ದಿವ್ಯ ಜ್ಞಾನವನ್ನು ಜಾಗೃತಗೊಳಿಸುವ ಕುಕ್ಕುಟನೊಡನೆ ಭಗವಾನ್‌ನ ಸಂಬಂಧವು ಘನಿಷ್ಟವಾಗಿದ್ದಂತೆ ಅಜನೊಡನೆ ಸಂಬಂಧವಿದೆ.

ದೇವತೆಗಳ ಸೇನಾಪತಿಯಾಗಿರುವುದರಿಂದ ಭಗವಾನ್ ಸುಬ್ರಹ್ಮಣ್ಯನು ಆರು ಪವಿತ್ರ ಸ್ಥಳಗಳಲ್ಲಿ ಪಾಳಯಗಳನ್ನು ಸ್ಥಾಪಿಸಿದನೆಂದು ದಕ್ಷಿಣ ಭಾರತದಲ್ಲಿ ಹೇಳಲಾಗುತ್ತದೆ. ತಮಿಳು ಭಾಷೆಯಲ್ಲಿ ಇದನ್ನು ಪಡೈವೀಡು ಎನ್ನುವರು. ಈ ಷಟ್‌ಸ್ಥಳಗಳು ದಕ್ಷಿಣದಲ್ಲಿ ಸುಬ್ರಹ್ಮಣ್ಯೋಪಾಸನೆಯ ಪ್ರಧಾನ ಕೇಂದ್ರವಾಗಿದೆ. ಷಟ್‌ಸ್ಥಳಗಳು ಶರೀರ ಷಟ್ ಚಕ್ರಗಳ ಪ್ರತೀಕವೆಂದು ಭಕ್ತರು ಭಾವಿಸಿದ್ದಾರೆ. ತಿರುಪ್ಪರ್ ಕುನ್ನರಮ್, ತಿರುಚೆಂದೂರ, ಪಳನಿ, ಸ್ವಾಮಿಮಲೈ, ತಿರುವಣ್ಣಾಮಲೈ ಮತ್ತು ಪಳಮುದಿರಚಾಲೆ ಎಂಬ ನಗರದಲ್ಲಿವೆ. ಇವುಗಳಲ್ಲಿ ತಿರುಚೆಂದೂರು ಎಂಬ ಕ್ಷೇತ್ರವು ಸಮುದ್ರ ತಟದಲ್ಲಿದ್ದು ಅಲ್ಲಿಯ ಒಂದು ಗುಹೆಯಲ್ಲಿ ಸುಬ್ರಹ್ಮಣ್ಯ ಸ್ವಾಮಿಯ ಸುಂದರ ದೇವಾಲಯವಿದೆ. ಉಳಿದ ಐದು ಸ್ಥಳಗಳು ಪರ್ವತದ ಮೇಲೆ ಇದೆ.

ದಕ್ಷಿಣ ಭಾರತದಲ್ಲಿ ಸುಬ್ರಹ್ಮಣ್ಯನ ಪೂಜಾ ಆರಾಧನೆಯು ಪ್ರಾಮುಖ್ಯವಾಗಿ ಅಥವಾ ಸ್ವತಂತ್ರ ದೇವತಾರೂಪದಲ್ಲಿ, ಸಂಪ್ರಧಾನ ದೇವತೆಯ ರೂಪದಲ್ಲಿ ಮತ್ತು ಪರಿಹಾರ ದೇವತೆಯ ರೂಪದಲ್ಲಿ ಆಗುತ್ತದೆ. ಸುಬ್ರಹ್ಮಣ್ಯ ಪ್ರಧಾನ ದೇವಾಲಯಗಳು ಹಲವು ಇವೆ. ಶಿವ, ವಿಷ್ಣು ಗಣಪತಿ ಮೊದಲಾದ ಪರಿವಾರ ದೇವತೆಗಳ ರೂಪದಲ್ಲಿ ಪ್ರತಿಷ್ಠಾಪಿತಗೊಂಡಿರುವನು. ಸುಬ್ರಹ್ಮಣ್ಯನ ಸ್ವತಂತ್ರ ಗುಹಾ ಮಂದಿರಗಳು ದಕ್ಷಿಣಭಾರತದಲ್ಲಿ ಇವೆ. ಶಿವ ವಿಷ್ಣುವಿನ ಮಂದಿರಗಳಲ್ಲಿ ಮುಖ್ಯ ಪರಿವಾರ ದೇವತೆಯ ರೂಪದಲ್ಲಿ ಸುಬ್ರಹ್ಮಣ್ಯನ ಪೂಜಾ ಅರ್ಚನೆ ನಡೆಯುತ್ತದೆ. ಪರಿವಾರ ದೇವತೆ ಸುಬ್ರಹ್ಮಣ್ಯನ ಮೂರ್ತಿಯು ಪ್ರಧಾನ ಗರ್ಭಗೃಹದ ಗೋಡೆಯ ಪ್ರತ್ಯೇಕವಾದ ದೇವಕೋಷ್ಟದಲ್ಲಿ ಅಥವಾ ಮಂದಿ



✿✿✿✿✿✿

# ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ದೇವಾಲಯ
## ಶ್ರೀನಿವಾಸ ಮಂಗಾಪುರ

# ನೂತನ ಆರ್ಜಿತ ಸೇವೆಗಳು

ದಿನೇ ದಿನೇ ಹೆಚ್ಚುತ್ತಿರುವ ಭಕ್ತರ ಸಂದಣಿಯ ಅಪೇಕ್ಷೆಯಂತೆ ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಎರಡು ಹೊಸ ಸೇವೆಗಳನ್ನು ಪ್ರವೇಶಗೊಳಿಸಲಾಗಿದೆ. ಅವುಗಳೆಂದರೆ -

### 1. ಶ್ರೀನಿವಾಸ ಅರ್ಚನಾ ದತ್ತಿಯೋಜನೆ :

ಹತ್ತು ವರ್ಷ ಕಾಲ ರೂ. 5000/- ದತ್ತಿ ನೀಡುವವರ ಅಪೇಕ್ಷೆಯ ದಿನದಂದು ವರ್ಷಕ್ಕೆ ಒಮ್ಮೆ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿಗೆ ಅರ್ಚನೆ ಮಾಡುವ ಅವಕಾಶ. ಈ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿಡಲಾಗುವುದು.

* ಈ ಸೇವೆಯಲ್ಲಿ ವ್ಯಕ್ತಿ, ಸಂಘ, ಸಂಸ್ಥೆಯ ಹೆಸರಿನಲ್ಲಿ ಅರ್ಚನೆ ನಡೆಸಬಹುದು.
* ದತ್ತಿ ನೀಡುವವರಿಗೆ ಅರ್ಚನೆಯ ದಿನವನ್ನು ನಿರ್ಧರಿಸುವ ಅವಕಾಶವಿದೆ.
* ದತ್ತಿ ನೀಡುವವರ ವರ್ಷಕ್ಕೆ ಒಮ್ಮೆ ಆಯ್ಕೆಯ ದಿನದಂದು ಅವರ ಕುಟುಂಬದ ಐದುಮಂದಿಗೆ ಅಷ್ಟೋತ್ತರ ಸಹಸ್ರನಾಮಾರ್ಚನೆಯ ವೇಳೆಯಲ್ಲಿ ಉಚಿತ ದರ್ಶನ ವುಂಟು.
* ಈ ಯೋಜನೆಯನ್ವಯ ದತ್ತಿ ನೀಡುವವರಿಗೆ ಒಂದು ಅಂಗವಸ್ತ್ರ, ಒಂದು ಕುಪ್ಪಸದ ಕಣದ ಬಹುಮಾನವುಂಟು.
* ಈ ದತ್ತಿಯನ್ವಯ ಅರ್ಚನಸೇವೆ ಹತ್ತು ವರ್ಷಕ್ಕೆ ಸೀಮಿತ.

### 2. ಅಭಿಷೇಕಾನಂತರ ವಸ್ತ್ರಾಲಂಕರಣ ಸೇವೆ :

ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಶುಕ್ರವಾರಾಭಿಷೇಕದ ನಂತರ ವಸ್ತ್ರಾಲಂಕರಣಕ್ಕಾಗಿ ಭಕ್ತರು ವಸ್ತ್ರಕಾಣಿಕೆ ನೀಡುವುದು ಪದ್ಧತಿ. ಈ ದಿನಗಳಲ್ಲಿ ಹೆಚ್ಚಿರುವ ಯಾತ್ರಿಕ ಸಂದಣಿಯಿಂದಾಗಿ ಈ ವಸ್ತ್ರಕಾಣಿಕೆ ನೀಡಬಯಸುವ ಗೃಹಸ್ಥರು ಐದು ವರ್ಷಗಳಿಗೂ ಹೆಚ್ಚುಕಾಲ ಕಾಯಬೇಕಾಗುತ್ತದೆ. ಇಂತಹದೇ ವಸ್ತ್ರಕಾಣಿಕೆಯನ್ನು ಶ್ರೀನಿವಾಸ ಮಂಗಾಪುರದಲ್ಲೂ ಈಗ ಸ್ವೀಕರಿಸಲಾಗುವ ವಸ್ತ್ರಾಲಂಕರಣ ಸೇವೆಯನ್ನು ಪ್ರವೇಶಗೊಳಿಸಲಾಗಿದೆ.

* ಈ ಸೇವೆಯಲ್ಲಿ ತಿರುಮಲೆಯಲ್ಲಿಯಂತೆಯೇ ಪ್ರತಿ ಶುಕ್ರವಾರವೂ ಅಭಿಷೇಕಾನಂತರ ಸ್ವಾಮಿಗೆ ನೂತನ ಮೇಲ್ಚಾತ್ ಹಾಗೂ ಉತ್ತರೀಯದಿಂದ ಅಲಂಕರಣ ನಡೆಸಲಾಗುವುದು.
* ಭಕ್ತರಿಂದ ಈ ಸೇವೆಗಾಗಿ ವಸ್ತ್ರವನ್ನು (ಮೇಲ್ಚಾತ್ ಹಾಗೂ ಉತ್ತರೀಯ) ಅಥವಾ ಅದರ ಬೆಲೆ ರೂ. 15000/- ಸ್ವೀಕರಿಸಲಾಗುವುದು.
* ತಿರುಮಲೆಯಲ್ಲಿ ನಂತೆಯೇ ಭಕ್ತರ ಕಡೆಯ ಐದು ಮಂದಿಗೆ ಅಭಿಷೇಕ ದರ್ಶನದ ಏರ್ಪಾಡು ಮಾಡಲಾಗುವುದು.
* ಅಭಿಷೇಕಾನಂತರ ಗೃಹಸ್ಥರಿಗೆ ಒಂದು ಅಂಗವಸ್ತ್ರ ಹಾಗೂ ಒಂದು ಕುಪ್ಪಸದ ಕಣವನ್ನು ಬಹೂಕರಿಸಲಾಗುವುದು.

ಯಾತ್ರಿಕರು ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿಯ ಈ ಸೇವೆಗಳಲ್ಲಿ ಭಾಗವಹಿಸಿ ಅನುಕೂಲಗಳನ್ನು ಪಡೆಯಬಹುದಾಗಿದೆ.

**ತಿ.ತಿ.ದೇ.**

✿✿✿✿✿✿

ರದ ಪ್ರಕಾರದಲ್ಲಿ ಪ್ರತ್ಯೇಕ ಗರ್ಭಗೃಹದಲ್ಲಿ ಪ್ರತಿಷ್ಠಾಪಿತವಾಗುತ್ತದೆ. ಕಾಂಚೀ ನಗರದ ಪ್ರಾಚೀನ ಶಿವ ಮಂದಿರದಲ್ಲಿ ಗರ್ಭಗೃಹದ ಉತ್ತರ ಗೋಡೆಯ ಪ್ರಕೋಷ್ಠದಲ್ಲಿ ಅಕ್ಷಮಾಲೆ ಕುಂಡಿಕೆ ಧರಿಸಿದ ಸುಬ್ಬಹ್ಮಣ್ಯನ ಮೂರ್ತಿಯಿದೆ. ಇದನ್ನು ಜ್ಞಾನಮೂರ್ತಿಯೆಂದು ಭಾವಿಸಿ ಪೂಜಿಸುತ್ತಾರೆ.

ಕುಮಾರ ತಂತ್ರದನುಸಾರವಾಗಿ ಸುಬ್ರಹ್ಮಣ್ಯನ ಪೂಜಾ ಅರ್ಚನೆ ನಡೆಸಲಾಗುತ್ತದೆ. ವಿಧಿಪೂರ್ವಕವಾಗಿ ದೈನಿಕ ಅಭಿಷೇಕ ಅರ್ಚನೆ ಮಾಡುತ್ತಾರೆ. ಫಾಲ್ಗುಣ ಮಾಸದಲ್ಲಿ ಉತ್ತರಾ ನಕ್ಷತ್ರ ದಿವಸ ಆಷಾಢದಲ್ಲಿಯ ಕೃತ್ತಿಕಾ ನಕ್ಷತ್ರ ಇದ್ದ ದಿನ, ಮಾರ್ಗಶೀರ್ಷದ ಷಷ್ಠಿಯಂದು ವಿಶೇಷವಾಗಿ ಪೂಜಾ ಉತ್ಸವ ಆಚರಿಸಲಾಗುತ್ತಿದೆ. ಪ್ರತಿಮಾಸದ ಷಷ್ಠಿಯು ಪ್ರಿಯತಿಥಿಯಾಗಿದೆ. ಸ್ಕಂದನು ಅಭಿಷೇಕಪ್ರಿಯ ದೇವತೆಯಾಗಿರುವನು. ಇವನನ್ನು ದಿನಾಲು ಶುದ್ಧೋದಕ ತೈಲ ಪಂಚಾಮೃತ ವಿಭೂತಿ ಇತ್ಯಾದಿಗಳಿಂದ ಅಭಿಷೇಕ ಮಾಡಲಾಗುತ್ತಿದೆ. ಪಳನಿ ಕ್ಷೇತ್ರದಲ್ಲಿ ಸುಬ್ರಹ್ಮಣ್ಯನು ಕೌಪೀನಧಾರಿಯಾಗಿ ಕೈಯಲ್ಲಿ ದಂಡ ಹಿಡಿದುಕೊಂಡು ಯೋಗಿಯ ರೂಪದಲ್ಲಿರುವನು. ಇಲ್ಲಿ ಭಗವಂತನ ಅಭಿಷೇಕ ಮಾಡಿದ ಪಂಚಾಮೃತವು ಸರ್ವರೋಗನಾಶಕವಾಗಿದೆ. ಗುಡಿಯಲ್ಲಿ ಸುಬ್ರಹ್ಮಣ್ಯಮೂರ್ತಿಯು ಮೇಲೆ ವಿಭೂತಿ ಚಂದನ ಮೊದಲಾದ ಲೇಪ ಹಚ್ಚಲಾಗುತ್ತಿದೆ. ವಿವಿಧ ಪ್ರಕಾರಗಳ ಮೃಷ್ಟಾನ್ನಗಳ ಜೊತೆಗೆ ಜೇನುತುಪ್ಪ ಸಜ್ಜೆ ಹಿಟ್ಟು-ಇತ್ಯಾದಿ ಸುಬ್ರಹ್ಮಣ್ಯನಿಗೆ ಇಷ್ಟವಾಗಿದೆ.

ತಮಿಳು ಪ್ರದೇಶದಲ್ಲಿ ತಮ್ಮತಮ್ಮಮನ ಕಾಮನೆಯನುಸಾರವಾಗಿ ಭಗವಂತನ ಪ್ರತ್ಯೇಕ ಹೆಸರುಗಳ ಸ್ಮರಣೆ ಪೂಜೆಯಾಗುತ್ತದೆ. ಕುಮಾರ ತಂತ್ರ ಶ್ರೀ ತತ್ವನಿಧಿಯಲ್ಲಿ ಅಗ್ನಿ ಜಾತಗಾಂಗೇಯ ಗುಹ ಬ್ರಹ್ಮಚಾರಿ ಸೌರಭೇಯ ಹೆಸರುಗಳಿಂದ ಸ್ತುತಿಸಲಾಗಿದೆ.

ಸುಬ್ರಹ್ಮಣ್ಯನ ಸ್ತುತಿ ಶಾರದಾ ತಿಲಕದಲ್ಲಿ ಇಂತಿದೆ :

ಸಿಂದೂರಾರುಣ ಕಾಂತಿಮಿಂದುವದನಂ
ಕೇಯೂರ ಹಾರಾದಿಭಾರೆ
ದಿವ್ಯೈರಾಭರಣ್ಯೆ ರ್ವಿಭೂಷಿತ ತನುಂ
ಸ್ವರ್ಗಸ್ಯ ಸೌಖ್ಯ ಪ್ರದಮ್
ಅಂಭೋಜಾ ಭಯ ಶಕ್ತಿ ಕುಕ್ಕುಟಧರಂ
ರಕ್ತಾಂಗರಾಗಾಂ ಶುಕಂ
ಸುಬ್ರಹ್ಮಣ್ಯ ಮುಪಾಸ್ಮಹೇ ಪ್ರಣಮತಾಂ
ಭೀತಿ ಪ್ರಣಾಶೋದ್ಯತಾಮ್



# ಗೋವಿಂದ ದಾಮೋದರ ಸ್ತೋತ್ರ

---ಕಂದಾಡೈ ಕೇಶವನ್.

ಬಿಲ್ವಮಂಗಲಾಚಾರ್ಯರಿಂದ ರಚಿತವಾದ ಗೋವಿಂದದಾಮೋದರ ಸ್ತೋತ್ರ ಸಂಸ್ಕೃತ ಭಾಷೆಯಲ್ಲಿ ಶ್ರೀಕೃಷ್ಣಪರಮಾತ್ಮನ ಲೀಲಾಮಾನುಷ ಕ್ರೀಡೆಗಳನ್ನು ಲಲಿತವಾದ ಸುಂದರವಾದ ಶೈಲಿಯಲ್ಲಿ ಬರೆದ ಮನೋಹರವಾದ ಕಾವ್ಯ. ಕೆಲವರು ಶ್ರೀಕೃಷ್ಣಕರ್ಣಾಮೃತವನ್ನು ಬರೆದ ಕವಿ ಲೀಲಾಶುಕರೇ ಸನ್ಯಾಸಿಗಳಾದಾಗ ಬಿಲ್ವಮಂಗಲಾಚಾರ್ಯರೆಂದು ಪ್ರಸಿದ್ಧರಾದರೆಂದು ಹೇಳುತ್ತಾರೆ. ಗೋವಿಂದದಾಮೋದರ ಸ್ತೋತ್ರವು ೭೧ ಶ್ಲೋಕಗಳ ಹರಿಚರಿತ್ರೆ. ಹರಿಯ ಲೀಲೆಗಳನ್ನು ಲಲಿತ ಕಾಂತ ಪದಾವಳಿಗಳಿಂದ ರಚಿಸಿ ಹಾಡಿದ ಚಿಕ್ಕ ಮಹಾಶ್ಲೋಕಗಳ ಸಂಕಲನ. ಭಕ್ತಿ ಕಾವ್ಯ, ಕವಿಯ ಅಂತಃಕರಣದಲ್ಲಿ ಹರಿಯುವ ಭಕ್ತಿಯ ಹೊನಲು ಗಂಗೆಯಂತೆ ನಿರ್ಮಲವಾಗಿದೆ. ಒಂದೊಂದು ಶ್ಲೋಕವೂ ಭಾಗವತದ ರಾಮಾಯಣದ ತನ್ನದೇ ಆದ ಕಥೆಯನ್ನು ತಿಳಿಸುತ್ತದೆ. ಒಂದೊಂದು ಶ್ಲೋಕವೂ ಭಕ್ತಿಯ ಚಿತ್ರಶಾಲೆ, ವಿಷ್ಣುಪುರಾಣ, ಭಾಗವತ, ಹರಿವಂಶ, ರಾಮಾಯಣಗಳಲ್ಲಿ ಕಾಣುವ ಹರಿಯ ಚರಿತೆಯ ಪುನರಾವಲೋಕನ, ಅದಕ್ಕೆ ನಮ್ಮಗಳ ಹೃದಯ ಮನಸ್ಸುಗಳು ಸ್ಪಂದನಗೊಳ್ಳುತ್ತವೆ. ಭಕ್ತಿಯ ಚಿಲುಮೆ ಕಾರಂಜಿಯಾಗಿ ಹಲವು ಬಣ್ಣಗಳಿಂದ ಜಿಗಿಯುತ್ತವೆ. ಕವಿಯಕಾಲ ಸುಮಾರು ೧೧ ನೇ ಶತಮಾನವಿರಬೇಕು. ಮೊದಲನೆಯ ಶ್ಲೋಕ ಪಾಂಡವರ ಪತ್ನಿ ಪಾಂಚಾಲಿಗೆ ಅಂದು ಕೌರವನ ತುಂಬ ಸಭೆಯಲ್ಲಿ ದುಶ್ಯಾಶನ ಕೈಯ್ಯಲ್ಲಿ ಸಿಲುಕಿ ಭಂಗಿಸಿದ ಕೇಶಾಂಬರದಿ ನಿಂತು ಅನನ್ಯ ಭಕ್ತಿಯಲ್ಲಿ ಹರಿಯನ್ನು ನೆನೆದು ಮೊರೆಯಿಟ್ಟ ಸಂದರ್ಭದ ಶ್ಲೋಕ. ಮಹಾ ಶೂರರಾದ ಐವರು ಪತಿಗಳು ನಿಸ್ಸಹಾಯಕರಾಗಿ ಕೌರವರ ಸಭೆಯಲ್ಲಿ ಮೂಕರಾಗಿ ಕುಳಿತಾಗ ದುಶ್ಯಾಶನನು ಬಹಿಷ್ಠೆಯಾದ ದ್ರೌಪದಿಯನ್ನು ಉಟ್ಟಸೀರೆಯಲ್ಲಿ ಎಳೆದು ತಂದು ಮಾನಭಂಗಮಾಡಲು ಉದ್ಯುಕ್ತನಾದಾಗ, ಭೀಷ್ಮ, ದ್ರೋಣ, ವಿದುರ ಮುಂತಾದ ಮಹಾತ್ಮರೂ ಮೂಕರಂತೆ ಕುಳಿತಾಗ, ದ್ರೌಪದಿ ಶ್ರೀಕೃಷ್ಣನಲ್ಲಿ ಶರಣಾಗತಳಾಗಿ ಮೊರೆಯಿಟ್ಟ ದೃಶ್ಯ ಮೊದಲೆರಡು ಶ್ಲೋಕಗಳಲ್ಲಿ ಆಚಾರ್ಯರು ಹಾಡಿರುವ ಭಾವಶೈಲಿ ಗಮನಿಸಿ--

ಅಗ್ರೇ ಕುರೂಣಾಮಥ ಪಾಂಡವಾನಾಂ
ದುಶ್ಶಾಸನೇ ನಾಹೃತ ವಸ್ತ್ರ ಕೇಶಾ
ಕೃಷ್ಣಾ ತದಾಕ್ರೋಶದನನ್ಯ ನಾಥಾ
ಗೋವಿಂದ ದಾಮೋದರ ಮಾಧವೇತಿ ||೧||

ಶ್ರೀಕೃಷ್ಣ ವಿಷ್ಣೋ ಮಧುಕೈಟಭಾರೇ
ಭಕ್ತಾನುಕಂಪಿನ್ ಭಗವನ್ ಮುರಾರೇ
ತ್ರಾಯಸ್ವ ಮಾಂ ಕೇಶವ ಲೋಕನಾಥ
ಗೋವಿಂದ ದಾಮೋದರ ಮಾಧವೇತಿ ||೨||

ಶ್ರೀಕೃಷ್ಣ ವಿಷ್ಣೋ ಮಧುಕೈಟಬಾರೇ, ಭಕ್ತರಲ್ಲಿ ಅನುಕಂಪ ತೋರುವ ಭಗವನ್ ಮುರಾರಿ ಕೇಶವ, ಲೋಕನಾಥ ಗೋವಿಂದ ದಾಮೋದರ, ಮಾಧವಾ ನನ್ನನ್ನು ರಕ್ಷಿಸು ಪ್ರಭು - ಎಂಬುವುದಾಗಿ ದ್ರೌಪದಿಯ ಅಳಲು ನಮ್ಮ ಕಣ್ಣುಮುಂದೆ ನಿಂತಂತೆ ಕವಿ ಚಿತ್ರಿಸಿದ್ದಾನೆ. ಭಾರತದ ಸಭಾಪರ್ವದಲ್ಲೂ ವ್ಯಾಸರು ಚಿತ್ರಿಸಿದ ದ್ರೌಪದಿಯು ಮೊರೆಯಿಡುವ ಶ್ಲೋಕವೂ ಕೂಡ--

ಶಂಖ ಚಕ್ರ ಗದಾಪಾಣೇ
ದ್ವಾರಕಾ ನಿಲಯ ಅಚ್ಯುತ
ಗೋವಿಂದ ಪುಂಡರೀಕಾಕ್ಷ
ರಕ್ಷಮಾಂ ಶರಣಾಗತಂ

-ಎಂಬುವುದಾಗಿ, ಗದಗಿನ ವೀರ ನಾರಾಯಣಪ್ಪನ ಕನ್ನಡ ಮಹಾಭಾರತದಲ್ಲೂ ಕೂಡ ದ್ರೌಪದಿ ಕೃಷ್ಣನನ್ನು ಕುರಿತು - ಕರುಣಿ ನೀನು. ಕಾರುಣ್ಯಕ್ಕೆ ಪಾತ್ರಳಾದ ತರಳೆ ನಾನು. ದೀನರ ಆರ್ತಿಯನ್ನೂ ದುಃಖವನ್ನೂ ದಾಟಿಸುವವನು ನೀನು. ಜಗತ್ತಿಗೆ ಕಾಣುವಂತೆ ದೀನೆ ಆರ್ತೆ ದುಃಖಿತೆ ನಾನಾಗಿದ್ದೇನೆ. ಬೇರೆಯಾವ ಗತಿಯೂ ಇಲ್ಲದೆ ಕಳವಳಿಸುತ್ತಾ ನಿನ್ನನ್ನು ಮೊರೆಹೋಗುತ್ತಿದ್ದೇನೆ ಕೃಪೆ ತೋರು - ಎಂಬುವುದಾಗಿ ಮೊರೆಯಿಡುವ ಸುಂದರ ಪದ್ಯದ ಸವಿ ನೋಡಿ--

ನಂದ ಗೋಪ ಕುಮಾರ ಗೋಪೀ
ವೃಂದ ವಲ್ಲಭ ದೈತ್ಯಮಥನ ಮು
ಕುಂದ ಮುರಹರ ಭಕ್ತವತ್ಸಲ
ಘನ ಕೃಪಾಜಲನಿಧೆ
ನೊಂದನೈ ನುಗ್ಗಾದೆನೈ ಗೋ
ವಿಂದ ಕೃಪೆ ಮಾಡಕಟಿನುತ ಪೊ
ಣ್ಣೇಂದು ಮುಖಿ ಹಲುಬಿದಳು
ಬಲು ತೆರದಿಂದಲಚ್ಯುತನ

ನಾರಿಯ ಮೊರೆ ಕೇಳಿದ ಕೃಷ್ಣ. ಮೊರೆಯಿಟ್ಟು ಒರಲುತ್ತಿದ್ದ ಪಾಂಚಾಲಿಯ ಸೀರೆ ಅಕ್ಷಯ ಸೀರೆಯಾಯಿತು. ಗೋವಿಂದ ದಿವ್ಯನಾಮ ಪ್ರಭಾವ ಭಕ್ತಿರಸಕ್ಕೆ ಸಿಕ್ಕಿದ ಸಿದ್ಧಿ ಪಾಂಚಾಲಿಯನ್ನು ಕಾಪಾಡಿದ ಕುರುಪಾಂಚಾಲರ ಕಥೆಯಲ್ಲಿ ಗೋವಿಂದನ ಅಭಿಮಾನ ಅಭಯಪ್ರಧಾನ ಘಟ್ಟ ಸುಂದರಮಯ, ಭಕ್ತರನ್ನು ಕಾಯುವುದೇ ತನ್ನ ಪರಮತ ನಿಷ್ಠೆಯೊಂದು ತೋರಿದ ಸಂದರ್ಭವಿದು.

ಮೂರನೆಯ ಶ್ಲೋಕ ಗೋಪಿಯ ಚಿತ್ತ ವೃತ್ತಿಯ ಸುಂದರ ಸನ್ನಿವೇಶದ ಶ್ಲೋಕ. ಈ ಶ್ಲೋಕವು ಕೃಷ್ಣಕರ್ಣಾಮೃತದಲ್ಲೂ ಕೂಡ ಲೀಲಾಶುಕರು ಹಾಡಿದ್ದಾರೆ. ಬಿಲ್ವಮಂಗಳರ ಈ ಶ್ಲೋಕ ಅರ್ಥಗರ್ಭಿತವಾದುದು. ವೇದಾಂತವನ್ನು ಸಾರುವ ಶ್ಲೋಕ ಬೋಧಪ್ರದವಾದುದು.

ವಿಕ್ರೇತುಕಾಮಾ ಕಿಲ ಗೋಪಕನ್ಯಾ
ಮುರಾರಿ ಪಾದಾರ್ಪಿತ ಚಿತ್ತವೃತ್ತಿಃ
ದಧ್ಯಾಧಿಕಂ ಮೋಹವಶಾದವೋಚತ್
ಗೋವಿಂದ ದಾಮೋದರ ಮಾಧವೇತಿ

ಒಬ್ಬ ಗೋಪಿ, ಕೃಷ್ಣಾನುರಾಗಿ ತನ್ನ ಚಿತ್ತ ವೃತ್ತಿಯಲ್ಲಿ ಮುರಾರಿಯ ಪಾದಗಳಲ್ಲಿ ಲೀನವಾಗಿದ್ದಳು. ಅವಳು ಹಾಲು ಮೊಸರುಗಳನ್ನು ಮಾರಲು ಹೊರಟು ಹಾಲು ಮೊಸರುಗಳಿಗಿಂತ ಹೆಚ್ಚಾಗಿ ಕೃಷ್ಣನ ಮೇಲೆಯೇ ಮೋಹವಿದ್ದದ್ದರಿಂದ "ಹಾಲು ಬೇಕೆ. ಮೊಸರು ಬೇಕೆ ಎಂಬುವುದಾಗಿ ಕೂಗುವ ಬದಲು ಗೋವಿಂದ ಬೇಕೆ. ದಾಮೋದರನು ಬೇಕೆ. ಮಾಧವನು ಬೇಕೆ ಎಂಬುವುದಾಗಿ ಕೂಗಿದಳಂತೆ. ನಾರದರ ಭಕ್ತಿ ಸೂತ್ರದಲ್ಲಿ ಭಕ್ತಿಯನ್ನು ವಿವರಿಸುತ್ತಾ "ತದರ್ಪಿತಾಖಿಲಾಚಾರಿತಾ ತದ್ವಿಸ್ಮರಣೇ ಪರಮವ್ಯಾಕುಲತೇತಿ" ಎಂಬುವುದಾಗಿ ಹೇಳುವಾಗ ಭಗವಂತನನ್ನು ಶರಣಾಗಿ ಎಲ್ಲವನ್ನೂ ಮಾಡುವುದು ಅವನನ್ನು ಕ್ಷಣಕಾಲ ಮರೆತರೂ ಪರಮ ವ್ಯಾಕುಲತೆಯನ್ನು ಪಡೆಯುವುದೇ ಭಕ್ತಿ ಎಂದು ವಿವರಿಸುತ್ತಾ "ಯಥಾವ್ರಜ ಗೋಪಿಕಾನಾಂ" ವ್ರಜಗೋಪಿಯರ ಹಾಗೆ, ತೈಲ ಧಾರೆಯಂತೆ ನಿರಂತರವಾಗಿ ಸ್ಮರಿಸುವ

ತಿರುಮಲ - ತಿರುಪತಿ ದೇವಸ್ಥಾನಗಳು

## ಅಭಿಷೇಕ ಸೇವೆಗಳು

ತಿರುಮಲ ತಿರುಪತಿ ದೇವಸ್ಥಾನಗಳ ಆಧ [illegible] ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧ ಸ್ಥಳಗಳಲ್ಲಿರುವ ಈ ದೇವಾಲಯಗಳೆಂದರೆ--

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.
2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.
3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.
4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.
5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.
6. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು [illegible]ಬೇಕೆಂದು ವಿನಂತಿಸಲಾಗಿದೆ.

ತಿ.ತಿ. ದೇವಸ್ಥಾನಗಳು,
--ತಿರುಪತಿ.

ಶಕ್ತಿ ಆ ಗೋಪಿಯರಿಗಿತ್ತು. ಅವರ ಚಿತ್ತೈಕಾಗ್ರತೆ ಅದ್ಭುತವಾದದು.

ಭಾಗವತದಲ್ಲಿ ಶುಕಮಹರ್ಷಿಗಳು ಗೋಪಿಯರನ್ನು ಕುರಿತು ಆಕ್ಷಿಪ್ತ ಚಿತ್ತಾಃ ಪ್ರಮದಾಃ (ಸೆಳೆಯಲ್ಪಟ್ಟು ಪರವಶರಾದ ಮನಸ್ಸುಳ್ಳ ಆ ಗೋಪಿಯರು) ತನ್ಮನಸ್ಕಾಃ, ತದಾಲಾಪಾಃ ತದ್ವಿಚೇಷ್ಟಾಃ ತದಾತ್ಮಿಕಾಃ ತದ್ಗುಣಾನೇವ ಗಾಯಂತ್ಯೋ ಆತ್ಮಾಗಾರಾಣಿ ನ ಸಸ್ಮರುಃ - ಅಂದರೆ ಅವರೆಲ್ಲರೂ ಆ ಭಗವನ್ಮಯವಾದ ಮನಸ್ಸುಳ್ಳವರಾಗಿ ಅವನ ವಿಷಯವಾದ ಮಾತುಗಳನ್ನೇ ಆಡುತ್ತಾ ಅವನಂತೆಯೇ ಕ್ರಿಯೆಗಳನ್ನು ಮಾಡುತ್ತ ಕೃಷ್ಣರೂಪವನ್ನು ಸ್ಮರಿಸುತ್ತಾ ತಮ್ಮಮನೆ ಮಠಗಳನ್ನು ಮರೆತರು ಎಂಬುವುದಾಗಿ ಉಲ್ಲೇಖಿಸಿದ್ದಾರೆ. ಬಿಲ್ವಮಂಗರು ಈ ವಿಷಯವನ್ನು ನೆನಪಿನಲ್ಲಿಟ್ಟೇ ಈ ಶ್ಲೋಕ ರಚಿಸಿದ್ದಾರೆ. ಮುಂದಿನ ಶ್ಲೋಕದಲ್ಲಿ ಒರಳಲ್ಲಿ ತುಂಬಿಟ್ಟ ಅಕ್ಕಿರಾಶಿಯ ಮುಂದೆ ಕುಳಿತ ಮುಗ್ಧೆಯರು ಮುಸಲದಿಂ ಕುಟ್ಟುತ್ತಾ ಆನಂದ ತುಂಬಿ ಗೋವಿಂದದಾಮೋದರ ಮಾಧವಾ ಎಂದು ಹಾಡುವ ದೃಶ್ಯಕಾವ್ಯ--

ಉಲೂಖಲೇ ಸಂಭೃತ ತಂಡುಲಾಂಶ್ಚ
ಸಂಘಟ್ಟಯಂತ್ಯೋ ಮುಸಲೈಃ ಪ್ರಮುಗ್ಧಾಃ
ಗಾಯಂತಿ ಗೋಪ್ಯೋ ಜನಿತಾನುರಾಗಾ
ಗೋವಿಂದ ದಾಮೋದರ ಮಾಧವೇತಿ ||೪||

ಐದು ಮತ್ತು ಆರು ಶ್ಲೋಕಗಳು ಮನೆಮನೆಗಳಲ್ಲಿ ಕ್ಷಣಕ್ಷಣವೂ ಗೋಪಿಯರು ಪಂಜರದ ಮರಿಗಿಣಿಗೆ ಗೋವಿಂದ ದಾಮೋದರ ಮಾಧವಾ ಎಂಬುವುದಾಗಿ ತೊದಲ್ನುಡಿಯನ್ನು ಕಲಿಸುವ ಕಮಲಾಕ್ಷಿಯರ ಲೀಲಾ ವಿಭವ. ಅರಗಿಣಿಯ ಅಂದದ ಚಂದದ ನುಡಿಯ ಇಂಚರ ಇವುಗಳ ಚಿತ್ರಾವಳಿ. ಏಳನೆಯ ಶ್ಲೋಕ ತೊಟ್ಟಿಲಲಿ ಮಲಗಿರುವ ಕಂದನನ್ನು ನಿದ್ರಿಸಲು ಹಾಡುವ ಜೋಗುಳಕ್ಕೆ ತಕ್ಕ ಸ್ವರ ತಾಳ ಮೇಲ ಗೀತಾವೈಖರಿ. ಹದಿಮೂರನೆಯ ಶ್ಲೋಕ ಅದ್ಭುತವಾದ ರಮ್ಯವಾದ ಶಬ್ದಚಿತ್ರ. ಕೃಷ್ಣ ಬೆಣ್ಣೆಯನ್ನು ಕದಿಯಲು ಬರುತ್ತಾನೆ. ತಾಯಿ ಗೋಪಿಗೆ ಕೃಷ್ಣಬಂದರೆ ಕಟ್ಟಿಹಾಕಬೇಕು. ತಕ್ಷಣವೇ ಕೂಗು ಎಂಬುವುದಾಗಿ ಆದೇಶ ನೀಡಿರುತ್ತಾಳೆ. ಕೃಷ್ಣ ಮೆಲ್ಲಮೆಲ್ಲನೆ ಮನೆಯ ಅಂಗಳದಿ ಬಂದಾಗ ಅವಳ ಮನದ ಅಂಗಳದಲ್ಲೂ ಪ್ರವೇಶಿಸೇ ಬಿಟ್ಟಿರುತ್ತಾನೆ. ಗೋಪಿ ತಾಯಿಯ ಆದೇಶ ಮರೆಯುತ್ತಾಳೆ. ಕೈಯ್ಯಲ್ಲಿ ಕಾಲಲ್ಲಿ ಘಲಿರೆನ್ನುವ ಕಂಕಣ. ಕಿಂಕಿಣಿ, ನಿತಂಬವನ್ನಲಂಕರಿಸುವ ಹೇಮ ಸೂತ್ರ, ಮುತ್ತಿನ ಹಾರದಿಂದ ಕಟ್ಟಿರುವ ಕಾಕಪಕ್ಷ, ಕೈಯ್ಯಲ್ಲಿ ಕೊಳಲು. ವೈಜಯಂತಿ ಮಾಲೆಯಿಂದ ಮೆರೆಯುವ ವಕ್ಷಸ್ಥಳ. ಕೃಷ್ಣನ ರೂಪವನ್ನು ಕಂಡು ಮಂತ್ರಮುಗ್ಧಳಾಗಿ ಅವನ ಕಣ್ಣುಗಳನ್ನು ಪ್ರೇಮದಿಂದ ಗೋವಿಂದ ದಾಮೋದರ ಮಾಧವಾ ಎಂದು ಸವರಿದಳಂತೆ.

ನಿಜಾಂಗನೇ ಕಂಕಣ ಕೇಳಿ ಲೋಲಂ
ಗೋಪೀ ಗೃಹೀತ್ವಾ ನವನೀತ ಗೋಲಂ
ಆಮರ್ದಯತ್ ಪಾಣಿತಲೇನ ನೇತ್ರೇ
ಗೋವಿಂದ ದಾಮೋದರ ಮಾಧವೇತಿ

ಗೋವಿಂದನ ನಾಮದ ಮಹಿಮೆ ಅಂತಹದ್ದು. ಭಾರತದಲ್ಲಿ ಅರಣ್ಯ ಪರ್ವದಲ್ಲಿ ವ್ಯಾಸರು "ಪವಿತ್ರಾಣಾಂ ಗೋಮಿದಃ ಪವಿತ್ರಂ ಪರ ಮುಚ್ಯತೇ ಪುಣ್ಯಾನಾಮಪಿ ಪುಣ್ಯೋಽಸೌಮಂಗಳಾನಾಂ ಚ ಮಂಗಳಂ" ಎಂಬುವುದಾಗಿ ಕೊಂಡಾಡಿದ್ದಾರೆ. ಆದ್ದರಿಂದಲೇ ಗೃಹಗೃಹಗಳಲ್ಲಿ ಗೋಪವಧೂಗಣವು ಸರ್ವದಾ ಒಂದು ಕಡೆ ಸೇರಿದಾಗ ಗೋವಿಂದ ದಾಮೋದರ ಮಾಧವಾ ಎಂದು ನಿತ್ಯವೂ ತಪ್ಪದೆ ಆ ಪುಣ್ಯದ ನಾಮಗಳನ್ನು ಪಠಿಸುವ ಗೋಕುಲದ ನಿತ್ಯ ದೃಶ್ಯವನ್ನು ಆಚಾರ್ಯರು ಹಾಡುತ್ತಾರೆ ೧೪ನೆಯ ಶ್ಲೋಕ--

ಗೃಹೇ ಗೃಹೇ ಗೋಪ ವಧೂ ಕದಂಬಾಃ
ಸರ್ವೇ ಮಿಲಿತ್ವಾ ಸಮವಾಯ ಯೋಗೇ
ಪುಣ್ಯಾನಿ ನಾಮಾನಿ ಪಠಂತಿ ನಿತ್ಯಂ
ಗೋವಿಂದ ದಾಮೋದರ ಮಾಧವೇತಿ

ಕೊಳಲನೂದುವ ಕೃಷ್ಣನ ಹೃದಯಂಗಮ ಚಿತ್ರ ೧೫ನೆಯ ಶ್ಲೋಕದಲ್ಲಿ ಬಿಲ್ವಮಂಗಳರು ಹೀಗೆಂದು ಹಾಡಿದ್ದಾರೆ.

ಮಂದಾರಮೂಲೇ ವದನಾಭಿರಾಮಂ
ಬಿಂಬಾಧರೇ ಪೂರಿತ ವೇಣುನಾದಂ
ಗೋ ಗೋಪ ಗೋಪೀಜನ ಮಧ್ಯಸಂಸ್ಥಂ
ಗೋವಿಂದ ದಾಮೋದರ ಮಾಧವೇತಿ

ಶ್ರೀಮಾನ್ ರಾಮಚಂದ್ರ ಜೋಯಿಸರ ಮಧುರವಾದ ಕನ್ನಡ ಅನುವಾದದ ಸವಿ ಈ ಶ್ಲೋಕಕ್ಕೆ ಹೀಗಿದೆ--

ಮಂದಾರ ಮೂಲದಲಿ ಮುದ್ದಾದ ಮೊಗದಲ್ಲಿ
ಕೆಳಚೆಂದುಟಿಯಿಂದ
ತುಂಬಲ್ ವೇಣುನಾದವನು
ಗೋ ಗೋಪ ಗೋಪೀಜನ
ಮಧ್ಯದಲಿ ಸಾರಿದರು
ಗೋವಿಂದ ದಾಮೋದರ ಮಾಧವಾ

-ಎಂದು ಹದಿನಾರನೆಯ ಶ್ಲೋಕ ಉಷಃಕಾಲದಲ್ಲಿ ಗೋಪಿಯರು ಮೊಸರು ಕಡೆಯುವ ದೃಶ್ಯಕಾವ್ಯ. ವಿವಿಧ ಭಾವಗಳಲ್ಲಿ ಗೋಪಿಯರು ಮೊಸರು ಮಂಥಿಸುವ ವೈಖರಿಗಳನ್ನು ಕವಿ

೧೭, ೧೮, ೧೯ ಶ್ಲೋಕಗಳಲ್ಲಿ ವಿವರಿಸಿದ್ದಾನೆ. ೨೦ನೇ ಶ್ಲೋಕ ಕ್ರೀಡಾಪರಂ ಭೋಜನಮಜ್ಜನಾರ್ಥಂ - ಆಟವಾಡಿದ ಮೇಲೆ ಊಟಸ್ನಾನಕ್ಕೆಂದು ಗೋಪಿ ತನ್ನ ಮಗನನ್ನು ಗೋವಿಂದ ದಾಮೋದರ ಮಾಧವಾ ಎಂದು ಕರೆದಳಂತೆ. ೨೧ ಮತ್ತು ೨೨ ಶ್ಲೋಕಗಳಲ್ಲಿ ಅರುಣೋದಯದಲ್ಲಿ ಸುಖದಿಂದ ನಿದ್ರೆಯಲಿ ಮಲಗಿರುವ ಮಾಧವನನ್ನು ದೇವರ್ಷಿ ಮುನಿಗಣ, ದ್ವಿಜಮುಖ್ಯರು - ತೇನಾಚ್ಯುತೇ ತನ್ಮಯತಾಂ. ಅಚ್ಯುತನ ಅನಂತ ಕಲ್ಯಾಣ ಗುಣಗಳಲ್ಲಿ ತಲ್ಲೀನರಾಗಿ ಮುದದಿಂದ ವೇದಪಾಠಗಳನ್ನು ಪಠಿಸಿದ ತರುವಾಯ ಗೋವಿಂದ ದಾಮೋದರ ಮಾಧವಾ ಎಂದು ಜಪಿಸಲಾರಂಭಿಸಿದರಂತೆ. ೨೩ ನೆಯ ಶ್ಲೋಕ ಬೃಂದಾವನದಲ್ಲಿ ಗೋ, ಗೋಪ ವಧೂಗಣವು ಗೋವಿಂದನ ವಿಯೋಗದ ದುಃಖತಪ್ತರಾಧೆಯನ್ನು ಕಂಡು ಕಣ್ಣೀರಿನ ತೊಯ್ದ ನಯನಗಳಿಂದ ಮರುಗಿ ಗೋವಿಂದ ದಾಮೋದರ ಮಾಧವಾ ಎಂದರಂತೆ. ೨೪ನೆಯ ಶ್ಲೋಕದಲ್ಲಿ ಕೃಷ್ಣನ ಅದ್ಭುತಲೀಲೆಗಳನ್ನು ಕಂಡು ಅವನು ಅತಿಮಾನುಷ ವ್ಯಕ್ತಿಯೆಂದು ತಿಳಿದು ಪ್ರಭಾತದಲ್ಲಿ ಸಂಚಾರಕ್ಕೆ ಹೊರಟ ತುರುಗಳನ್ನು ತದ್‌ರಕ್ಷಣಾರ್ಥಂ. ಅವುಗಳನ್ನು ಸುಖವಾಗಿ ಕಾಪಾಡಿಕೊಂಡುಬರಲು ತನ್ನ ತನಯನಾದ ತಾಮರಕಣ್ಣನನ್ನು ತಟ್ಟೆಬ್ಬಿಸಿದಳಂತೆ ಯಶೋದಾ - ಗೋವಿಂದ ದಾಮೋದರ ಮಾಧವಾ ಎಂದು ಕರೆಯುತ್ತಾ. ೨೫ನೆಯ ಶ್ಲೋಕದಲ್ಲಿ ಮಧ್ಯಾಹ್ನ ಪ್ರವಾಳದಂತೆ ಶೋಭೆಯಿಂದ ಕೂಡಿದ ದೀರ್ಘಕೇಶವುಳ್ಳ ಮುನಿಗಳು ಫಲಮೂಲಭರಿತರಾಗಿ ತೃಪ್ತರಾಗಿ ಮರದಡಿಯಲ್ಲಿ ಸಂತಸದಿಂದ ಗೋವಿಂದ ದಾಮೋದರ ಮಾಧವಾ ಎಂಬುವುದಾಗಿ ನುತಿಸ ತೊಡಗಿದರಂತೆ. ೨೬ನೆಯ ಶ್ಲೋಕದಲ್ಲಿ ಕೃಷ್ಣವಿರಕ್ತಮಾನಸರಾದ ವ್ರಜಸ್ತ್ರೀಯರು ಅವನನ್ನು ಅಗಲಿದ ವಿರಹದ ದುಃಖದ ನೋವಿನಲ್ಲಿ ಕಾತುರತೆಯಿಂದ ಲಜ್ಜೆಯನ್ನೂ ತೊರೆದು ಸುಸ್ವರದಿಂದ ಗೋವಿಂದ ದಾಮೋದರ ಮಾಧವಾ ಎಂದು ರೋದಿಸಿದರಂತೆ. ೨೭ನೆಯ ಶ್ಲೋಕ ಹಿಂದಿನ ಶ್ಲೋಕಗಳಲ್ಲಿ ತಿಳಿಸಿದಂತೆಯೇ ಮಣಿ ಪಂಜರದಲ್ಲಿರುವ ಮರಿಗಿಣಿಯು ಗೋಪಿಗೆ ಮುದ್ದಾದ ಮಾತುಗಳನ್ನು ಕಲಿಸಿದಂತೆ. ಮಾತಿನ ಮೋಡಿಗೆ ಮರುಳಾದ ಮುಗ್ದೆ ಕಲಿತ ಮಾತನ್ನು ಆನಂದಕಂದ ವ್ರಜ ಚಂದ್ರ ಕೃಷ್ಣ ಗೋವಿಂದ ದಾಮೋದರಾ ಮಾಧವಾ ಎಂದು ಪುನರುಚ್ಚಿಸಿದಳಂತೆ. ೨೮ನೆಯ ಶ್ಲೋಕ ಗೋವತ್ಸಬಾಲಕ್ಕೆ ಮಕ್ಕಳ ಜುಟ್ಟನ್ನು ಕಟ್ಟಿದ ಅಂಬುಜಾಕ್ಷನನ್ನು ಆದರದಿ ಗಲ್ಲವನು ಪಿಡಿದು ತಾಯಿ ಯಶೋದೆ ಗೋವಿಂದ ದಾಮೋದರ ಮಾಧವಾ ಎಂಬು ಕರೆದಳಂತೆ.

೨೯ ನೆಯ ಶ್ಲೋಕವಲ್ಲಿ ಪ್ರಭಾತಕಾಲದಲ್ಲಿ ವರವಲ್ಲವೃಂದದವರು ಗೋರಕ್ಷಣಾರ್ಥವಾಗಿ ಬಿದಿರುದೆತ್ತವ ಪಿಡಿದು ಓಲೈಸಿದರು. ಅನಂತರ ಆದಿ ಪುರುಷನನ್ನು ಗೋವಿಂದದಾಮೋದರ ಮಾಧವಾ ಎಂದುಕರೆದರು. ಮೂವತ್ತನೆಯ ಶ್ಲೋಕ ಮತ್ತು ಮೂವತ್ತುಮೂರನೆಯ ಶ್ಲೋ ಲೋಕಗಳು ಕಾಳಿಂಗಮರ್ದನದ ದೃಶ್ಯಶ್ಲೋಕಗಳು. ಇಲ್ಲಿ ಬಿಲ್ವಮಂಗಳರು--

ಜಲಾಶಯೇ ಕಾಳೀಯಮರ್ದನಾಯ
ಯದಾ ಕದಂಬಾದಪತನ್ ಮುರಾರಿಃ
ಗೋಪಾಂಗನಾಶ್ಚು ಕ್ರುಶುರೇತ್ಯ ಗೋಪಾ
ಗೋವಿಂದ ದಾಮೋದರ ಮಾಧವೇತಿ
ಸರೋವರೇ ಕಾಲೀಯನಾಗ ಬದ್ಧಂ
ಶಿಶುಂ ಯಶೋದಾ ತನಯಂ ನಿಶಮ್ಯ
ಚಕ್ರುಃ ಲುಠಂತ್ಯಃ ಪಥಿ ಗೋಪಬಾಲಾ
ಗೋವಿಂದ ದಾಮೋದರ ಮಾಧವೇತಿ

ಭಾಗವತದಲ್ಲಿ ಶುಕಮುನಿಗಳು ಶ್ರೀಕೃಷ್ಣನಿಂದ ಕಾಳಿಯದಮನವನ್ನು ಕುರಿತು ಹೇಳುತ್ತಾ ಪ್ರಭುವಾದ ಶ್ರೀಕೃಷ್ಣನು ಕಾಳೀಯನೆಂಬ ಕೃಷ್ಣ ಸರ್ಪದಿಂದ ಕೆಡಿಸಲ್ಪಟ್ಟ ನೀರುಳ್ಳ ಯಮುನಾ ನದಿಯನ್ನು ಕಂಡು ಅದನ್ನು ಪರಿಶುದ್ಧಿಗೊಳಿಸಲು ಇಚ್ಚೈಸಿ ಮಡುವಿನ ನೀರಿನೊಳಗೆ ಧುಮುಕಿದನೆಂದು ತಿಳಿಸಿದ್ದಾರೆ. ಅನಂತ ಸ್ವರೂಪನಾದ ಭಗವಂತನಲ್ಲಿ ಅನುರಕ್ತವಾದ ಮನಸ್ಸುಳ್ಳವರಾದ ಗೋಪಿಯರು ಶ್ರೀಕೃಷ್ಣನ ಮಂದಹಾಸ ಕುಡಿನೋಟ ಸವಿನುಡಿ ನೆನೆಸಿಕೊಳ್ಳುತ್ತ ಕಾಳಿಂಗ ಸರ್ಪದಿಂದ ಬಂಧಿಸಲ್ಪಟ್ಟ ಅವನನ್ನು ನೋಡಿ ದುಃಖತಪ್ತರಾಗಿ ಶೋಕಿಸಿದರು. ಸಕಲ ಕಲೆಗಳ ಆದಿಗುರುವಾದ ಕೃಷ್ಣನು ಕಾಳಿಂಗನ ಹೆಡೆಗಳ ಮೇಲೆ ನರ್ತಿಸಲಾರಂಭಿಸಿದನು. ಆ ತಾಂಡವ ನೃತ್ಯದಿಂದ ಹೆಡೆಗಳಲ್ಲಿ ಬಲಗುಂದಿ ಮುಖಗಳಿಂದ ರಕ್ತ ಸೋರುತ್ತಿರಲು ಮುರಿದ ಶರೀರವುಳ್ಳವನಾಗಿ ಕಾಳಿಂಗನು ನಿಶ್ಚೇತನಾಗಿ "ಚರಾಚರ ಗುರುಂ ಪುರಾಣ ಪುರುಷಂ ನಾರಾಯಣಂ ಸ್ಮೃತ್ವಾ ತಂ ಮನಸಾ ಆರಣಂ ಜಗಾಮ" ಎಂಬುವುದಾಗಿ ಕಾಳಿಂಗನ ಶರಣಾಗತಿ ದೃಶ್ಯವನ್ನು ಶುಕಮುನಿಗಳು ವಿವರಿಸುವಾಗ ನಾಗಪತ್ನಿಯರು ಶ್ರೀಕೃಷ್ಣನನ್ನು ಕುರಿತು ಅವನ ಪಾದಗಳ ಬಗ್ಗೆ ಪ್ರಶಂಸಿಸುವ ಶ್ಲೋಕಗಳು ಅದ್ಭುತವಾದವು. ಇಲ್ಲಿ ಬರುವ ಕೃಷ್ಣನ ಚಿಂತನ ಲಹರಿಯೂ ಚೇತೋಹಾರಿ. ನಾಗಪತ್ನಿಯರ ಅರಿವು ಅಮೋಘವಾದದು--

ಕಸ್ಯಾನುಭಾವೋಽಸ್ಯ ನ ದೇವ
ವಿದ್ಮಹೇ - ತವಾಂಘ್ರಿರೇಣು ಸ್ಪರ್ಶಾಧಿಕಾರಃ

ಜಗನ್ಮಾತೆಯಾದ ಶ್ರೀ ಮಹಾಲಕ್ಷ್ಮಿ ದೇವಿ ಎಲ್ಲ ಬಯಕೆಗಳನ್ನು ತೊರೆದು ದೀರ್ಘಕಾಲ ತಪಸ್ಸನ್ನು ಆಚರಿಸಿ ನಿನ್ನ ಪಾದ ಕಮಲಗಳ ಸಾಮೀಪ್ಯ ಪಡೆದಳು. ಅಂತಹ ನಿನ್ನ ಪಾದ ಧೂಳಿಯ ಸ್ಪರ್ಶಹರ್ತೆ ನಮ್ಮ ಗಂಡನಿಗೆ ಲಭಿಸಿದ್ದು ಯಾವ ಸುಕೃತದ ಫಲವೋ ತಿಳಿಯಲಿಲ್ಲ. ತಮೋಗುಣನಾದ ಸರ್ಪರಾಜನಿಗೆ ನಿನ್ನ ಪಾದಧೂಳಿಸ್ಪರ್ಶವಾಯಿತು. ಇವನ ಪುಣ್ಯಕ್ಕೆ ಎಲ್ಲೆಯಿಲ್ಲ. ಆ ನಾಗಪತ್ನಿಯರು ಪ್ರಭುವಿನ ಚರಣ ಕಮಲಗಳನ್ನು ಕುರಿತು--

ನ ನಾಕಪೃಷ್ಠಂ ನ ಚ ಸಾರ್ವಭೌಮಂ
ನ ಪಾರಮೇಷ್ಠ್ಯಂ ನ ರಸಾಧಿಪತ್ಯಂ
ನ ಯೋಗಸಿದ್ಧೀಃ ಅಪುನರ್ಭವಂ ವಾ
ವಾಂಛಂತಿ ಯದ್ಪಾದರಜಃ ಪ್ರಪನ್ನಾಃ

ಸ್ವಾಮಿ ನಿನ್ನ ಚರಣ ಕಮಲಗಳಲ್ಲಿ ಆಶ್ರಯಿಸುವ ಮಹಾತ್ಮರು ಸ್ವರ್ಗದ ಪದವಿಯನ್ನಾಗಲಿ, ಸಾರ್ವಭೌಮ ಪದವಿಯನ್ನಾಗಲಿ, ಚತುರ್ಮುಖದ ಪಟ್ಟವನ್ನಾಗಲಿ, ಪಾತಾಳಲೋಕದ ಆಧಿಪತ್ಯವನ್ನಾಗಲಿ ಆಸೆ ಪಡುವುದಿಲ್ಲ. ಅವರು ಮೋಕ್ಷಪದವಿಯನ್ನೂ ಕೂಡ ಅಪೇಕ್ಷೆ ಪಡಲಾರರೆಂದು ತಿಳಿಸಿದ್ದಾರೆ. ಪುರಂದರ ದಾಸರಾದರೋ ದುಷ್ಟ ಕಾಳಿಂಗನ ಮೆಟ್ಟಿ ಭರದಿಂದ ಪುಟ್ಟ ಪಾದವನು ಇಟ್ಟ ಶ್ರೀಕೃಷ್ಣನು ಮೆಟ್ಟಿದ ತದ್ಧಿಮಿ ತಧಿಗಿಣತೋಂ ಎಂದು - ಆಡಿದನೋ ರಂಗ ಅದ್ಭುತದಿಂದಲಿ ಕಾಳಿಂಗನ ಫಣೆಯಲಿ - ಆಡಿದನೋ ಎಂಬುವುದಾಗಿ ಸೊಗಸಾದ ಆರಭಿರಾಗ ಆದಿತಾಳದಲ್ಲಿ ಹಾಡಿ ಕೊಂಡಾಡಿದ್ದಾರೆ. ಇಲ್ಲಿ ಕೃಷ್ಣನ ಪಾದದ ಹೆಗ್ಗಳಿಕೆ ಆಗಿನ ಲೋಕಕ್ಕೆಲ್ಲ ಪ್ರಕಟವಾಯಿತು. ೩೧ ಮತ್ತು ೩೪ ಶ್ಲೋಕಗಳು ಗೋಕುಲ ನಿರ್ಗಮನದ ಚಿತ್ರ ಕಾವ್ಯ ಪರಂಪರೆ-

ಅಕ್ರೂರ ಮಾಸಾಧ್ಯ ಯದಾ ಮುಕುಂದಃ
ಚಾಪೋತ್ಸವಾರ್ಥಂ ಮಥುರಾಂ ಪ್ರವಿಷ್ಟಃ
ತದಾ ಸ ಪೌರೈಃ ಜಯತೀತ್ಯಭಾಷೀ
ಗೋವಿಂದ ದಾಮೋದರ ಮಾಧವೇತಿ

ಅಕ್ರೂರಯಾನೇ ಯದುವಂಶನಾಥಂ
ಸಂಗಚ್ಛಮಾನಂ ಮಥುರಾಂ ನಿರೀಕ್ಷ್ಯ
ಊಚುಃ ವಿಯೋಗಾತ್ ಕಿಲ ಗೋಪ ಬಾಲಾ
ಗೋವಿಂದ ದಾಮೋದರ ಮಾಧವೇತಿ

ಅಕ್ರೂರನು ಗೋಕುಲಕ್ಕೆ ಬಂದು ಮುದದಿ ಮುಕುಂದನನ್ನು ಮಧುರಾಪುರಕ್ಕೆ ಚಾಪೋತ್ಸವಕ್ಕೆ ಕರೆದೊಯ್ಯಲು ರಥವನ್ನು ತಂದಾಗ ಪುರಜನರ

ಲ್ಲರು ಗೋವಿಂದದಾಮೋದರ ಮಾಧವಾ ಎಂದು ಜಯಘೋಷಮಾಡಿದರು. ಆದರೆ ಅಕ್ರೂರನ ಜೊತೆಯಲ್ಲಿ ಯದುವಂಶನಾಥನು ಹೊರಟಿದ್ದನ್ನು ಕಂಡು ಗೋಪಿಯರು ವಿರಹವ್ಯಥೆಯಿಂದ ಗೋವಿಂದ ದಾಮೋದರ ಮಾಧವಾ ಎಂದು ವಿಲಾಪ ಮಾಡಿದರಂತೆ. ಶುಕಮಹರ್ಷಿಗಳು ಗೋಪಿಯರ ವಿರಹವನ್ನು ಕುರಿತು ಅಕ್ರೂರಂ ವ್ರಜಂ ಆಗತಂ ಚ ಉಪಶ್ರುತ್ಯ ಭೃಶಂ ವ್ಯಥಿತಾಃ ಬಭೂವುಃ (ಗೋಪಾಂಗನೆಯರು ತುಂಬಾ ದುಃಖಿತರಾದರು.) ಅನ್ಯಾಶ್ಚ ತದನುಧ್ಯಾನ ನಿವೃತ್ತಾ ಶೇಷ ವೃತ್ತಯಃ (ಕೆಲವು ಗೋಪಿಯರು ಕೃಷ್ಣನ ಸರ್ವಭಾವಗಳನ್ನೂ ಅಂತೆಯೇ ಧ್ಯಾನಮಾಡುತ್ತ ಎಲ್ಲಾ ವಿಷಯಗಳಿಂದ ಇಂದ್ರಿಯಗಳಿಂದ ಬುದ್ಧಿಯಿಂದ ನಿವೃತ್ತಗೊಂಡವರಾಗಿ ಹೊರಗಿನ ಲೋಕದ ಪರಿಯೇ ಇಲ್ಲದವರಾದರು) ಎಂಬುವುದಾಗಿ ತಿಳಿಸಿದ್ದಾರೆ.

ಕನ್ನಡದ ವೈಷ್ಣವ ಕವಿ ಪು.ತಿ. ನರಸಿಂಹಾಚಾರ್ಯರು ತಮ್ಮ ಗೋಕುಲ ನಿರ್ಗಮನದಲ್ಲಿ ಆಭೇರಿ ರಾಗದಲ್ಲಿ ಹಾಡಿದ್ದಾರೆ ಗೋಪೀ ಭಾವದಲ್ಲಿ--

ಪೋಗದಿರೈ ಪೋಗದಿರೈ ಪೋಗದಿರಯ್ಯಾ
ಮಾರಸುಂದರ ಗಿರಿಧರ ನೀ ಪೋಗದಿರಯ್ಯಾ
ನಮ್ಮೊಲವಿನ ಪ್ರಾಣ ನೀ ನಮ್ಮನುಳಿವೆಯಾ
ನಮ್ಮ ಭವದ ತ್ರಾಣ ನೀ ನಮ್ಮ ತೊರೆವೆಯಾ
ಮೀನನುಳಿವ ನೀರಿನಂತೆ ಕೆರೆಯ ತೊರೆವ ಗಾಳಿಯಂತೆ
ಪೋಗದಿರಯ್ಯಾ........ ಪೋಗದಿರೈ"

ಇತ್ಯಾದಿ ಹಾಡಿದ್ದಾರೆ. ಬಿಲ್ವಮಂಗಳಾಚಾರ್ಯರು ತಮ್ಮ ೩೦ನೆಯ ಶ್ಲೋಕದಲ್ಲಿ ಕೃಷ್ಣನ ವಿರಹದಿಂದ ಬಳಲುತ್ತಿರುವ ರಾಧೆಯನ್ನು ಕಂಡ ಗೋಪಿಯೂ ಕಣ್ಣೀರಿಟ್ಟಳು ಪ್ರಫುಲ್ಲೋತ್ಪಲ ನಯನಗಳಿಂದ - ಎಂಬುವುದಾಗಿ ತಿಳಿಸುವಾಗ--

ಸಾ ನೀರಜಾಕ್ಷೀಂ ಅವಲೋಕ್ಯ ರಾಧಾಂ
ರುರೋದ ಗೋವಿಂದ ವಿಯೋಗ ಖಿನ್ನಾಂ
ಸಖೀ ಪ್ರಫುಲ್ಲೋತ್ಪಲ ಲೋಚನಾಭ್ಯಾಂ
ಗೋವಿಂದ ದಾಮೋದರ ಮಾಧವೇತಿ

೪೨, ೪೩, ೪೪ ಹಾಗೂ ೪೫ ಶ್ಲೋಕಗಳು ರಾಮಾಯಣದ ಬಗ್ಗೆ ಪಿತೃವಾಕ್ಯ ಪಾಲನೆಗೆ ಶ್ರೀರಾಮನು ಕಾನನಕ್ಕೆ ಹೊರಟಾಗ ತಾಯಿ ಕೌಸಲ್ಯೆ ಗೋವಿಂದ ದಾಮೋದರ ಮಾಧವನೆಂದು ರೋಧಿಸಿದಳಂತೆ. ಏಕಾಂಗಿ ಸೀತೆ ದಂಡಕಾರಣ್ಯದಲ್ಲಿ ದಶಕಂಠ ರಾವಣನಿಂದ ಮೋಸದಿಂದ ಸೆಳೆದೊಯ್ಯಲ್ಪಟ್ಟಾಗ ಗೋವಿಂದ ದಾಮೋದರ ಮಾಧವನೆಂದು ಹಲುಬಿದಳಂತೆ. ಶೋಕಿತಳಾದ ಜಾನಕಿಯೂ ಕೂಡ ಗೋವಿಂದ ದಾಮೋದರ ಮಾಧವನೆಂದು ಶೋಕಿಸಿದಳಂತೆ.

ಪ್ರಸೀದ ವಿಷ್ಣೋ ರಘುವಂಶನಾಥ
ಸುರಾಸುರಾಣಾಂ ಸುಖದುಃಖ ಹೇತೋ
ರುರೋದ ಸೀತಾ ತು ಸಮುದ್ರಮಧ್ಯೇ
ಗೋವಿಂದ ದಾಮೋದರ ಮಾಧವೇತಿ ||೪೫||

ಮುಂದೆ೪೬ನೆಯ ಶ್ಲೋಕ ಗಜೇಂದ್ರಮೋಕ್ಷದ ಘಟ್ಟ--

ಅಂತರ್ಜಲೇ ಗ್ರಾಹ ಗೃಹೀತ ಪಾದೋ
ವಿಸೃಷ್ಟ ವಿಕ್ಲಿಷ್ಟ ಸಮಸ್ತ ಬಂಧುಃ
ತದಾ ಗಜೇಂದ್ರೋ ನಿತರಾಂ ಜಗಾದ
ಗೋವಿಂದ ದಾಮೋದರ ಮಾಧವೇತಿ

ಪಾಂಡ್ಯ ದೇಶದ ಅರಸನಾದ ಇಂದ್ರದ್ಯುಮ್ನನು ಅಗಸ್ತ್ಯ ಋಷಿಯ ಶಾಪದಿಂದ ಆನೆಯಾಗಿ ತನ್ನ ವೃಂದದೊಡನೆ ವಿಹರಿಸುತ್ತಾ ಇದ್ದಾಗ ದೊಡ್ಡಮಡುವಿನಲ್ಲಿ ಶಾಪಗ್ರಸ್ತನಾಗಿದ್ದ ಓರ್ವ ಗಂದರ್ವನು ಮೊಸಲೆ ರೂಪದಿಂದ ಆನೆಯ ಕಾಲನ್ನು ಹಿಡಿದೆಳೆದನು. ನೀರಲ್ಲಿ ಮಕರ ಪಾದವ ಪಿಡಿಯಲು ಆನೆ ಎಷ್ಟು ಪ್ರಯತ್ನಪಟ್ಟರೂ ಬಿಡಿಸಿಕೊಳ್ಳಲಾಗಲಿಲ್ಲ.

ಸಮಸ್ತಗಜ ಬಂಧುಗಣ ಗಜರಾಜನನ್ನು ದುಃಖ ದಿಂದ ತೊರೆದು ದೂರನಿಂತಾಗ ಆನೆ ಪೂರ್ವ ಸಂಸ್ಕಾರ ಬಲದಿಂದ ಹರಿಯನ್ನು ಅತಿ ದೈನ್ಯದಿಂದ ಗೋವಿಂದ ದಾಮೋದರ ಮಾಧವಾ ಎಂದು ಬೇಡಿ ತಂತೆ. ಪುರಂದರ ದಾಸರೂ ಕೂಡ ಕರಿ ಪ್ರಹ್ಲಾದಾದಿ ಭಕ್ತರ ಪತಿ ಕರಿಸಲು ಒದಗಿದೆ ಶ್ರೀಧರ ಎಂಬುವು ದಾಗಿ ಆರ್ತಭಾವದಿಂದ ಹಾಡಿದ್ದಾರೆ.

೪೮ ನೆ ಶ್ಲೋಕ ದುರ್ವಾಸಮುನಿಗಳು ದುರ್ಯೋಧನನ ಆಸೆಯಂತೆ ದ್ರೌಪದಿ ಊಟ ಮಾಡಿದ ಮೇಲೆ ಊಟಕ್ಕೆ ಮುನಿಗಣಗಳೊಡನೆ ಬಂದಾಗ ಅಕ್ಷಯ ಪಾತ್ರೆ ಬರಿದಾಗಿರಲು ಅಂತರಾ ತ್ಮನಾದ ಗೋವಿಂದನನ್ನು ಮನಸ್ಸಿನಲ್ಲಿ ನೆನಸಿ ದೈನ್ಯ ತೆಯಿಂದ ಮೊರೆಯಿಟ್ಟಳು

ದುರ್ವಾಸಸೋ ವಾಕ್ಯಮುಪೇತ್ಯ ಕೃಷ್ಣಾ
ಸಾ ಚಾಬ್ರವೀತ್ ಕಾನನ ವಾಸಿ ನೀಶಂ
ಅಂತಃ ಪ್ರವಿಷ್ಟಂ ಮನಸಾ ಜುಹಾವ
ಗೋವಿಂದ ದಾಮೋದರ ಮಾಧವೇತಿ

೫೪ ನೆಯ ಶ್ಲೋಕ. ಕುಲಶೇಖರ ಆಳ್ವಾರರು ತಮ್ಮ ಮುಕುಂದಮಾಲೆಯಲ್ಲಿ ನೆನೆದಂತೆ, ನಾಲ ಗೆಯೇ ಕೇಶವನನ್ನು ಕೀರ್ತಿಸು - ಜಿಹ್ವೇ ಕೀರ್ತಯ ಕೇಶವಂ ಮುರರಿಪುಂ - ಎಂಬುವ ಬಾವ ಶೈಲಿ ಯಲ್ಲೇ ಬಿಲ್ವಮಂಗಳರೂ ಕೂಡ - ನಾಲಿಗೆಯೇ ಸದಾ ಕೃಷ್ಣನ ಸುಂದರ ನಾಮಗಳನ್ನು ಸ್ತುತಿಸು. ಅವು ಸಮಸ್ತ ಭಕ್ತರ ಅಪಾಯಗಳನ್ನು ನಾಶಮಾಡುವಂ ತಹ ಪುಣ್ಯ ನಾಮವು ಎಂಬುವುದಾಗಿ ತಿಳಿಸುತ್ತಾ- -

ಜಿಹ್ವೇ ಸದೈವ ಭಜ ಸುಂದರಾಣಿ
ನಾಮಾನಿ ಕೃಷ್ಣಸ್ಯ ಮನೋಹರಾಣಿ
ಸಮಸ್ತ ಭಕ್ತಾರ್ತಿ ವಿನಾಶನಾನಿ
ಗೋವಿಂದ ದಾಮೋದರ ಮಾಧವೇತಿ
ಗೋವಿಂದ ಗೋವಿಂದ ಹರೇಮುರಾರೇ
ಗೋವಿಂದ ಗೋವಿಂದ ಮುಕುಂದ ಕೃಷ್ಣ
ಗೋವಿಂದ ಗೋವಿಂದ ರಥಾಂಗಪಾಣೇ
ಗೋವಿಂದ ದಾಮೋದರ ಮಾಧವೇತಿ

ಗೋವಿಂದನಾಮವು ಸುಖದಲ್ಲೂ ದುಃಖ ದಲ್ಲೂ ಶಾಂತಿಗೆ ಮೂಲ ಮರಣಕಾಲದಲ್ಲಿ ಜಪಿಸು ನೀ ಗೋವಿಂದ ದಾಮೋದರ ಮಂತ್ರವನು, ನಾಲ ಗೆಯೇ ನೀನು ಶ್ರೀನಾಥ ವಿಶ್ವೇಶ್ವರ ವಿಶ್ವಮೂರ್ತೇ ಶ್ರೀ ದೇವಕೀನಂದನ ದೈತ್ಯ ಶತ್ರೋ ಎಂಬುವುದಾಗಿ ನುಡಿ ಎಂಬುವುದಾಗಿ ೫೯ ನೇ ಶ್ಲೋಕದಲ್ಲಿ ಆಚಾ ರ್ಯರು ಹಾಡಿದ್ದಾರೆ. ಮುಂದಿನ ೬೦ ರಿಂದ ೭೧ ಶ್ಲೋಕಗಳು ನಾಲಗೆಯೇ ಸವಿ ಗೋವಿಂದ ನಾಮಾ ಮೃತವನ್ನು ಎಂಬುವುದಾಗಿ ಹಾಡಿದ್ದಾರೆ. ಈ ಪ್ರತಿಯೊಂದು ಶ್ಲೋಕವನ್ನು ನುಡಿಯಲು ಚಂದ. ಹುಟ್ಟುವುದು ಅಮೃತಾನಂದ-

ನಾರಾಯಣ ಹರೇ ನೃಸಿಂಹ
ಪ್ರಹ್ಲಾದ ಬಾಧಾಹರ ಹೇ ಕೃಪಾಲೋ
ಜಿಹ್ವೇ ಪಿಬಸ್ವ ಅಮೃತ ಮೇತದೇವ
ಗೋವಿಂದ ದಾಮೋದರ ಮಾಧವೇತಿ
ಶ್ರೀಕೃಷ್ಣ ಗೋವಿಂದ ಹರೇ ಮುರಾರೇ
ಹೇನಾಥ ನಾರಾಯಣ ವಾಸುದೇವ
ಜಿಹ್ವೇ ಪಿಬ ಸ್ವಾಮೃತ ಮೇತ ದೇವ
ಗೋವಿಂದ ದಾಮೋದರ ಮಾಧವೇತಿ

ಇಂತಹ ಮಾಧವೀ ಶ್ಲೋಕಗಳೂ ಕೂಡ ಕುಲ ಶೇಖರ ಆಳ್ವಾರರ ಮುಕುಂದ ಮಾಲೆಯಲ್ಲಿ ನಾವು ಕಾಣಬಹುದು. ಕುಲಶೇಖರರೂ ಕೂಡ--

ಅನಂತ ವೈಕುಂಠ ಮುಕುಂದ ಕೃಷ್ಣ
ಗೋವಿಂದ ದಾಮೋದರ ಮಾಧವೇತಿ
ವಕ್ತುಂ ಸಮರ್ಥೋಽ ಪಿ ನ ವಕ್ತಿ ಕಶ್ಚಿತ್
ಅಹೋ ಜನಾನಾಂ ವ್ಯಸನಾಭಿ ಮುಖ್ಯಂ

ಎಂಬುವುದಾಗಿ ಹೇಳುತ್ತಾ ಅನಂತ ವೈಕುಂ ಠಮುಕುಂದ ಕೃಷ್ಣ ಗೋವಿಂದ ದಾಮೋದರ ಮಾಧವಾ ಎಂಬುವುದಾಗಿ ಹೇಳಲು ಸಮರ್ಥರಾ ಗಿದ್ದರೂ ಕೂಡ ಯಾರೂ ಹೇಳುವುದಿಲ್ಲವಲ್ಲ ಇದೇನು ಆಶ್ಚರ್ಯ! ಜನರ ಮನಸ್ಸು ವ್ಯಸನ ಗಳ ಕಡೆಯೇ ತಿರುಗಿದೆಯಲ್ಲ ಇವಲ್ಲವೇ ಮಹ ದಾಶ್ಚರ್ಯ ಎನ್ನುವರು.

ಬಿಲ್ವಮಂಗಳಾಚಾರ್ಯರೂ ಕೂಡ ತಮ್ಮ ಶ್ಲೋಕ ರತ್ನಗಳು ಮುಗಿಸುತ್ತಾ ಕೊನೆಯ ೭೧ ನೆಯ ಶ್ಲೋಕ ದಲ್ಲಿ--

ವಕ್ತುಂ ಸಮರ್ಥೋಽಪಿ ನವಕ್ತಿ ಕಶ್ಚಿತ್
ಅಹೋ ಜನಾನಾಂ ವ್ಯಸನಾಭಿಮುಖ್ಯಂ
ಜಿಹ್ವೇ ಪಿಬಸ್ವಾಮೃತ ಮೇತದೇವ
ಗೋವಿಂದ ದಾಮೋದರ ಮಾಧವೇತಿ

ಈ ಶ್ಲೋಕವನ್ನು ಶ್ರೀಮಾನ್ ರಾಮಚಂದ್ರ ಜೋಯಿಸರು ತಮ್ಮ ಪ್ರತಿಭಾಪೂರ್ಣವಾದ ಶೈಲಿ ಯಲ್ಲಿ ಅನುವಾದಮಾಡುವಾಗ ಹೀಗೆಂದು ಹೇಳಿ ದ್ದಾರೆ.

ನುಡಿಯಲ್ ಸಮರ್ಥರಿದ್ದರೂ
ನುಡಿಯರಯ್ಯೋ
ವ್ಯಸನವಂ ಮುಂದೂಡಿ ನಿಲುವರ್ ಮಾನವರು
ನಾಲಗೆಯೇ ನೀ ಕುಡಿ ಹರಿನಾಮಾಮೃತವನು
ಗೋವಿಂದ ದಾಮೋದರ ಮಾಧವಾ

ಎಂದು ಈ ಪುಟ್ಟ ಶ್ಲೋಕಗಳ ಸಂಕಲನದಲ್ಲಿ ಹರಿ ನಾಮ ಪ್ರಭಾವ ಆಚಾರ್ಯರು ಎತ್ತಿ ತೋರಿದ್ದಾರೆ. ಭಕ್ತಿ ಪಂಥದಲ್ಲಿ ದೇವರ ನಾಮಕ್ಕೆ ಹೆಚ್ಚಾದ ಸ್ಥಾನ ವಿದೆ. ನಾಮವೇ ಮಹಾಮಂತ್ರ, ಹರಿನಾಮದಿಂದ ಸರ್ವ ಪಾಪಗಳ ನಾಶನ, ಸಕಲ ಇಷ್ಟಾರ್ಥಗಳ ಸಿದ್ಧಿ. ಸಹಸ್ರನಾಮ ಒಡೆಯನು ಗೋವಿಂದನು. ಮಂತ್ರ ಗಳನ್ನು ಜಪಿಸಬೇಕಾದರೆ ಗುರುವಿನ ಮಂತ್ರೋಪ ದೇಶ ಮುಖ್ಯವಿಧಿ ನಿಯಮಗಳು. ಆದರೆ ಹರಿನಾ ಮಕ್ಕೆ ವಿಧಿನಿಯಮ ನಿರ್ಬಂಧಗಳು ಇಲ್ಲ, ಕಲಿಯು ಗದಲ್ಲಿ ಸುಲಭಸಾಧನವು ನಾಮಸಂಕೀರ್ತನೆ. ದೇವ ರಿಗಿಂತ ಭಕ್ತರು ಶ್ರೇಷ್ಠ ಹೇಗೋ ಹಾಗೆಯೇ ದೇವ ರಿಗಿಂತ ಅವನ ನಾಮವು ಶ್ರೇಷ್ಠ. ಪುರಂದರದಾಸರು ನಮಗೆ ನೀನು ಬೇಡ. ನಿನ್ನ ಹಂಗೂ ಬೇಡ. ಕೇವಲ ನಿನ್ನ ನಾಮದ ಬಲವೊಂದಿದ್ದರೆ ಸಾಕು ಎಂದು ಸಾರಿ ದ್ದಾರೆ. ಶ್ರೀ ವೈಷ್ಣವ ಸಂತರು ಆಳ್ವಾರ್ ಆಚಾರ್ಯರೆ ಲ್ಲರೂ ಶ್ರೀಮನ್ನಾರಾಯಣನ ಮಂತ್ರದ ಮಹಿಮೆಗ ಳನ್ನು ವಿಧವಿಧವಾಗಿ ಹಾಡಿದ್ದಾರೆ. ಪುರಂದರ ದಾಸ ರಾದರೋ ರಾಮ ಎಂಬುವ ಎರಡು ಅಕ್ಷರದ ಮಹಿ ಮೆಯನು ಪಾಮರರು ತಾವೇನು ಬಲ್ಲರಯ್ಯಾ - ಹರಿನಾಮ ಸಮಸ್ತ ಭವ ನಿವಾರಣವಯ್ಯ ನಾಮವೆ ಸರ್ವ ಪವಿತ್ರ ಮಾಡುವುದು ಸಂಸಾರವೆಂಬ ಸಾಗರ ವನುತ್ತರಿಸುವೊಡೆ ಕಂಸಾರಿ ನಾಮವೊಂದು ಸಾಕು ಮನವೆ -

ಸ್ಮರಣೆ ಒಂದೇ ಸಾಲದೆ ಗೋವಿಂದನ ನಾಮ ಒಂದೇ ಸಾಲದೇ, ನಿನ್ನಾಕೋ ನಿನ್ನ ಹಂಗ್ಯಾಕೋ ನಿನ್ನನಾಮದ ಬಲವೊಂದಿದ್ದರೆ ಸಾಕೊ. ಎಂಬುವು ದಾಗಿ ಹಲವು ಪದಗಳಲ್ಲಿ ನಾಮದ ಮಹಿಮೆ ಸಾರಿ ದ್ದಾರೆ. ಮಹಾಭಾರತದಲ್ಲಿ ಶ್ರೀಕೃಷ್ಣನೂ ಕೂಡ ದ್ರೌಪದಿಯು ಆರ್ತಿಯಿಂದ ಕೃಷ್ಣಾ ಎಂದು ಕೂಗಿ ಕರೆದಾಗ ತಾನು ಅವಳಿಂದ ಬಹುದೂರದಲ್ಲಿಯೇ ಇದ್ದು ಅವಳ ಸನಿಹಕ್ಕೆ ತಕ್ಷಣವೇ ಹೋಗಲಿಲ್ಲವಲ್ಲ ಎಂಬ ಕೊರತೆ ತನ್ನ ಮನದಾಳದಲ್ಲಿ ನಿಂತು ಅದೂ ಎಂದೆಂದಿಗೂ ವೃದ್ಧಿಯಾಗುತ್ತಿದೆ. ಏನುಮಾಡಲಿ ಎಂಬುವುದಾಗಿ ಸ್ವತಃ ಭಗವಾನ್ ಕೂಡ--

ಗೋವಿಂದೇತಿ ಯದಾಽಕ್ರಂದತ್
ಕೃಷ್ಣಾ ಮಾಂ ದೂರವಾಸಿನಂ
ಪ್ರವೃದ್ಧಮಿವ ಋಣಂ
ಮೇ ಹೃದಯಾನ್ನಾಪಸರ್ಪತಿ

ಎಂಬುವುದಾಗಿ ಮರುಗಿದ್ದಾನೆ. ಗೋವಿಂದ ನಾಮಕ್ಕೆ ಅಷ್ಟು ಮಹಿಮೆ ಇರುವುದರಿಂದಲೇ ಬಿಲ್ವ ಮಂಗಲಾಚಾರ್ಯರು ಗೋವಿಂದ ದಾಮೋದರ ಮಾಧವ ಶ್ಲೋಕಗಳನ್ನು ರಚಿಸಿ ನಮಗೆ ಮಹದು ಪಕಾರ ಮಾಡಿದ್ದಾರೆ. ಈ ಶ್ಲೋಕಗಳ ಮಾಧುರ್ಯ ನಿರ್ಮಲ ಮಂಜುಲ ನಿರ್ಝರಿಣಿಯಾಗಿದೆ. ಕೃಷ್ಣ ರಾಮರ ಕಥಾದರ್ಶನ ಆಧ್ಯಾತ್ಮ ಚಿಂತನ ಮಂಥನ ಗಳು ಈ ಕಾವ್ಯದಲ್ಲಿವೆ.

# ತಿರುಮಲೆ -- ತಿರುಪತಿ ದೇವಸ್ಥಾನಗಳು -- ತಿರುಪತಿ.

# ಶ್ರೀ ಬಾಲಾಜಿ ಆರೋಗ್ಯ ವರಪ್ರಸಾದಿನಿ ಯೋಜನೆ

ಶ್ರೀ ವೆಂಕಟೇಶ್ವರಸ್ವಾಮಿಯ ಸನ್ನಿಧಿಯಿರುವ ತಿರುಮಲೆ ಪ್ರಾಚೀನ ಕಾಲದಿಂಲೂ ಯಾತ್ರಿಕರ ಆಕರ್ಷಣಕೇಂದ್ರವಾಗಿದೆ. ಪ್ರತಿದಿನವೂ ಸಾವಿರಾರು ಮಂದಿ ಭಕ್ತ ಯಾತ್ರಿಕರು ತಮ್ಮ ಐಹಿಕ ಆಧ್ಯಾತ್ಮಿಕ ಅಭಿವೃದ್ಧಿಗಾಗಿ ಇಲ್ಲಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

ತಿ. ತಿ. ದೇವಸ್ಥಾನಗಳು ಮಾನವಸೇವೆಯಲ್ಲಿ ಶ್ರದ್ಧಾಪೂರ್ವಕವಾಗಿ ಭಾಗವಹಿಸುವ ಪರಂಪರೆಯನ್ನು ಹೊಂದಿದೆ. ಕುಷ್ಠರೋಗ ನಿವಾರಣಾಕೇಂದ್ರ, ಅಂಗವಿಕಲರ ಅಭಿವೃದ್ಧಿ ಕೇಂದ್ರ, ಅನಾಥ ಶರಣಾಲಯ, ಕೇಂದ್ರ ಆಸ್ಪತ್ರೆ ಮೊದಲಾದವನ್ನು ತಿ.ತಿ.ದೇ. ಯಶಸ್ವಿಯಾಗಿ ನಿರ್ವಹಿಸುತ್ತಿದೆ. ಜನಕ್ಕೆ ವಿಶೇಷ ಆಧುನಿಕ ವೈದ್ಯಕೀಯ ಸೇವೆ ಸಲ್ಲಿಸಲು ಸ್ವಾಮಿಯ ಆಶೀರ್ವಾದದ ಬೆಂಬಲದಿಂದ ಶ್ರೀ ವೆಂಕಟೇಶ್ವರ ವೈದ್ಯಕೀಯ ಸಂಸ್ಥೆ (ಸ್ವಿಮ್ಸ್)ಯನ್ನು -- ದೆಹಲಿ, ಅಜ್ಮೀರ, ಪಾಂಡಿಚೇರಿ, ಚಂಡೀಘರ್‌ಗಳ ಆಲಿಂಡಿಯಾ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್, ಮಾದರಿಯಲ್ಲಿ ಆರಂಭಿಸಲಾಗಿದೆ. ಶ್ರೀ ವೆಂಕಟೇಶ್ವರ ವೈದ್ಯವಿಜ್ಞಾನ ಸಂಸ್ಥೆಯ ಮೂಲ ಉದ್ದೇಶ -- ಮನುಷ್ಯನ ಸರ್ವಾಂಗೀಣ ಆರೋಗ್ಯಸಾಧನೆ -- ಇಲ್ಲಿ ವೈದ್ಯಸೇವೆ, ವೈದ್ಯವಿಜ್ಞಾನದ ಶಿಕ್ಷಣ -- ತರಬೇತಿಗಳೊಡನೆ ಸಂಶೋಧನೆ ಅಭಿವೃದ್ಧಿಯನ್ನೂ ನಡೆಸಲಾಗುವುದು.

ಇಂತಹ ವೈದ್ಯವಿಜ್ಞಾನದ ಬಾಗಿಲು ನಮ್ಮಲ್ಲಿನ ಎಲ್ಲರಿಗೂ ತೆರೆದಿರಬೇಕು. ಅದನ್ನು ಸಾಧಿಸಲೆಂದೇ ಶ್ರೀ ಬಾಲಾಜಿ ಆರೋಗ್ಯವರ ಪ್ರಸಾದಿನಿ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ವಿಶೇಷ ತಜ್ಞ ವೈದ್ಯಕೀಯ ಸೇವೆಯು ಎಲ್ಲರಿಗೂ ಸುಲಭವಾಗಿ ದೊರೆಯುವಂತೆ ಮಾಡಲು ದಾನಿಗಳಿಂದಲೂ ಸಾರ್ವಜನಿಕರಿಂದಲೂ ಉದಾರವಾದ ದೇಣಿಗೆಗಳನ್ನು ನಿರೀಕ್ಷಿಸಲಾಗಿದೆ.

ಯೋಜನೆಯ ಸಾರಾಂಶ ಹೀಗಿದೆ :---

* ದಾನಿಗಳು ರೂ 1000-- ಅಥವಾ ಗುಣಕಗಳಲ್ಲಿ ದಾನ ನೀಡಬಹುದು. ಅದಕ್ಕೆ ಸಮನಾದ ಧನವನ್ನು ತಿ.ತಿ.ದೇ. ಸೇರಿಸಿ ಮೊತ್ತದ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿರಿಸಿ ಅದರ ಬಡ್ಡಿಯನ್ನು ಬಡವರ, ವೈದ್ಯಕೀಯ ಚಿಕಿತ್ಸೆಗಾಗಿ ಬಳಸಲಾಗುವುದು.
* ಹತ್ತು ಲಕ್ಷ ಹಾಗೂ ಹೆಚ್ಚಿನ ಧನವನ್ನು ನೀಡುವವರ ಹೆಸರಿನಲ್ಲಿ ಒಂದು ಸಂಶೋಧನ ಪೀಠವನ್ನು ಸ್ಥಾಪಿಸಲಾಗುವುದು.
* ದಾನವನ್ನು ವ್ಯಕ್ತಿ / ಕುಟುಂಬ / ಕಂಪನಿ / ಯಾರಾದರೂ ಮಾಡಬಹುದು.
* ಐದು ಲಕ್ಷ ರೂಗಳಿಗಿಂತ ಹೆಚ್ಚಿಗೆ ದಾನ ನೀಡುವವರ ಹೆಸರನ್ನು ಸಂಸ್ಥೆಯ ಸ್ವಾಗತಕಚೇರಿಯಲ್ಲಿ ಬರೆದು ಪ್ರದರ್ಶಿಸಲಾಗುವುದು.
* ಪ್ರಯೋಜನ ಪಡೆದು ಆರೋಗ್ಯಹೊಂದಿದವರ ಡಿಸ್ಚಾರ್ಜ್ ಚೀಟಿಯಲ್ಲಿ ದಾನಿಗಳ ಹೆಸರನ್ನು ನಮೂದು ಮಾಡಲಾಗುವುದು.

## ದಾನಿಗಳಿಗೆ ನೀಡಲಾಗುವ ಸೌಕರ್ಯಗಳು :

* ಶ್ರೀ ಬಾಲಾಜೀ ಆರೋಗ್ಯ ವರಪ್ರಸಾದಿನಿ ಯೋಜನೆಗೆ ನೀಡಲಾದ ದಾನ 80 ಜಿ. ಕಲಮಿನನ್ವಯ ಆದಾಯಕರ ಮುಕ್ತ.
* ಆಸ್ಪತ್ರೆಯಲ್ಲಿ ದಾನಿಗಳ ಕುಟುಂಬಕ್ಕೆ ಬಾಡಿಗೆ ಕೋಣೆ ಹವಾನಿಯಂತ್ರಿತ ಕೋಣೆಗಳನ್ನು ನೀಡಲಾಗುವುದು
* 5 ಲಕ್ಷ ಮತ್ತು ಹೆಚ್ಚಿನ ಹಣದ ದಾನಿಗಳ ಹೆಸರಿನಲ್ಲಿ ಬಾಡಿಗೆ ಕೋಣೆಗಳನ್ನೂ ನಿರ್ಮಿಸಲಾಗುವುದು.
* 5 ಲಕ್ಷ ಹಾಗೂ ಹೆಚ್ಚಿನ ಹಣದ ದಾನದಿಂದ ದಾನಿಗಳು ಪ್ರತಿವರ್ಷ ಒಂದು ಚಿಕಿತ್ಸೆಯನ್ನು ಪ್ರಾಯೋಜಿತಗೊಳಿಸಬಹುದು.
* ದಾನಿಗಳು ಒಳರೋಗಿಗಳ, ಹೊರರೋಗಿಗಳ, ಆಹಾರಕ್ಕಾಗಿಯೂ ನೀಡಬಹುದು. ಸಂಸ್ಥೆಯಲ್ಲಿನ ವಾರ್ಷಿಕ ಸಾರಿಗೆ ವೆಚ್ಚಗಳಿಗೂ ನೀಡಬಹುದು.

  ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ -- ಇವರ ಹೆಸರಿನಲ್ಲಿ ಪಡೆದ ಡಿ. ಡಿ. ಯನ್ನು -- ನಿರ್ದೇಶಕರು ಶ್ರೀ ವೆಂಕಟೇಶ್ವರ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ -- ಇವರಿಗೆ ಕಳುಹಿಸುತ್ತ ಜೊತೆಗೇ ಕೆಳಕಂಡ ವಿವರಗಳನ್ನೂ ಎಲ್ಲ ದಾನಿಗಳೂ ನೀಡಬೇಕು.
* ಒಂದು ಲಕ್ಷ ಅಥವಾ ಅದಕ್ಕಿಂತ ಹೆಚ್ಚಿನ ಹಣ ದಾನಮಾಡುವವರ ಹೆಸರು ವಿಳಾಸಗಳೊಡನೆ ಅವರ ಮನೆಯ ಎಲ್ಲ ಸದಸ್ಯರ ಪಾಸ್‌ಪೋರ್ಟ್ ಸೈಜಿನ ಈಚಿನ ಭಾವಚಿತ್ರ ವಿರಬೇಕು.
* ಆದಾಯತೆರಿಗೆ ವಿನಾಯತಿಯ ಪ್ರಮಾಣ ಪತ್ರವನ್ನು ಯಾರ ಹೆಸರಿಗೆ ನೀಡಬೇಕು ಎಂಬುದು.
* ದಾನಿಗಳು ಇತರತ್ರ ಯಂತ್ರ ಉಪಕರಣಗಳನ್ನು ನೀಡಲೂ ಅವಕಾಶವಿದೆ, ಅಥವಾ ವಾಹನಗಳನ್ನೂ ನೀಡಬಹುದಾಗಿದೆ. ಗ್ರಾಮೀಣ ಪ್ರಾಂತ್ಯಗಳಲ್ಲಿ ತಿ. ತಿ. ದೇವಸ್ಥಾನಗಳ ಆರೋಗ್ಯವಿಸ್ತರಣಾ ಶಿಬಿರಗಳನ್ನೂ ಪ್ರಾಯೋಜಿತಗೊಳಿಸಬಹುದು.

ಮಿಕ್ಕ ವಿಷಯಗಳನ್ನು ತಿಳಿಯಲು ಬರೆಯಬೇಕಾದ ವಿಳಾಸ--

**ಕಾರ್ಯನಿರ್ವಹಣಾಧಿಕಾರಿ,**
ತಿರುಮಲೆ, ತಿರುಪತಿ, ದೇವಸ್ಥಾನಗಳು -- ತಿರುಪತಿ.

ಅಥವಾ

**ನಿರ್ದೇಶಕರು,**
ಶ್ರೀ ವೆಂಕಟೇಶ್ವರ ಇನ್ಸಿಟಿಟ್ಯೂಟ್ ಆಫ್
ಮೆಡಿಕಲ್ ಸೈನ್ಸಸ್, ತಿರುಪತಿ.

# ಋಣ

---ಕೆ. ಕೇಶವಮೂರ್ತಿ.

'ಋಣ'ಕ್ಕೆ ಸಂಬಂಧಿಸಿದಂತೆ ' ಉಪ್ಪಿನ ಋಣ' ಎಂಬ ಸಾಲ. ಸಾಲಮಾಡಿ ಅದನ್ನು ತೀರಿಸದೆ ಹೋದರೆ ಸಾಲಕೊಟ್ಟವನಿಗೆ ಇವನು ಋಣಿ. ಅಂದರೆ ಸಾಲಗಾರ.

ಋಣ ಎಂಬ ಪದಕ್ಕೆ 'ಉಪಕಾರ' ಎಂಬ ಅರ್ಥವೂ ಇದೆ. "ನಿಮ್ಮ ಋಣವನ್ನು ನಾನು ಈ ಜನ್ಮದಲ್ಲಿ ತೀರಿಸಲು ಸಾಧ್ಯವಿಲ್ಲ" ಎಂದು ಹೇಳುವಾಗ "ನಿಮ್ಮ ಉಪಕಾರಕ್ಕೆ ನಾನು ಪ್ರತ್ಯುಪಕಾರ ಮಾಡಿ ಅದರ ಹೊರೆಯನ್ನು ತೀರಿಸುವ ಸ್ಥಿತಿಯಲ್ಲಿಲ್ಲ" ಎಂದರ್ಥ. ಒಬ್ಬ ವ್ಯಕ್ತಿಯಿಂದ ನಾವು ಉಪಕೃತರಾದಾಗ ನಾವು ಅವನಿಗೆ ಋಣಿಗಳು. ಇದನ್ನೇ ಜನಪದರು 'ಉಪ್ಪಿನ ಋಣ' ಎಂದು ಹೇಳಿದ್ದು. ಈ ಉಪ್ಪಿನ ಋಣವನ್ನು ತೀರಿಸಲೇಬೇಕು ಎಂಬುದು ಹಿರಿಯರ ಮಾತು.

ರನ್ನಮಹಾಕವಿ ತನ್ನ 'ಸಾಹಸಭೀಮವಿಜಯ' ವೆಂಬ ಕಾವ್ಯದಲ್ಲಿ "ಜೋಳದ ಪಾಳಿಯುಂ ಬಗೆದರಿಲ್ಲಾ ದ್ರೋಣನುಂ ದ್ರೌಣಿಯುಂ" - ಎನ್ನುತ್ತಾನೆ. ದ್ರೋಣಾಚಾರ್ಯರೂ ಮತ್ತು ಅವರ ಮಗ ಅಶ್ವತ್ಥಾಮನೂ ತನ್ನ ಉಪ್ಪಿನ ಋಣವನ್ನೂ ತೀರಿಸಲಿಲ್ಲ ಎಂಬುದು ಇಲ್ಲಿ ದುರ್ಯೋಧನನ ಆಕ್ರೋಶ. ಇಂದು ಕನ್ನಡದ ನುಡಿಗಟ್ಟಾಗಿರುವ ಉಪ್ಪಿನ ಋಣವೇ ಹತ್ತನೇ ಶತಮಾನದಲ್ಲಿ 'ಜೋಳದ ಪಾಳಿ' ಯಾಗಿತ್ತು. ಪಂಪ ಕವಿ ರನ್ನನ ಹಿರಿಯ ಅವನ ವಿಕ್ರಮಾರ್ಜುನ ವಿಜಯದಲ್ಲಿಯೂ ಇದೇ ರೀತಿಯ ಮಾತು ಬರುತ್ತದೆ.

ಈ ಪ್ರಪಂಚದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯೂ ಸಹ ಒಂದಲ್ಲ ಒಂದು ರೀತಿಯಲ್ಲಿ ಋಣಿಯೇ. ಹುಟ್ಟಿದಮೇಲೆ ನಾವು ಸಾಲಮಾಡದಿದ್ದರೂ ಸಹ ಹುಟ್ಟುವಾಗಲೇ ಋಣದಿಂದಲೇ ಹುಟ್ಟಿದ್ದೇವೆ. ಅವೇ ದೇವ ಋಣ, ಪಿತೃ ಋಣ ಮತ್ತು ಋಷಿ ಋಣ. ಇವುಗಳನ್ನೇ 'ಋಣತ್ರಯಗಳು' ಎನ್ನುತ್ತಾರೆ. ಈ ಪ್ರಪಂಚದಲ್ಲಿರುವ ಎಲ್ಲ ಜೀವರುಗಳ ಸೃಷ್ಟಿಗೆ ಆ ಭಗವಂತನೇ ಕಾರಣ. ನಾವು ಇಲ್ಲಿ ನೆಮ್ಮದಿಯಾಗಿ ಬಾಳಲು ಏನೇನು ಬೇಕೋ ಅವೆಲ್ಲವನ್ನೂ ಆ ದೇವರೇ ನಮಗೆ ಒದಗಿಸಿಕೊಟ್ಟಿದ್ದಾನೆ. ಕಾಲ ಕಾಲಕ್ಕೆ ಮಳೆ, ಬೆಳೆ, ಶಾಖ, ಬೆಳಕು ಒಂದಲ್ಲ; ಹಲವು ಹತ್ತು ಉಪಕಾರ ಆ ಭಗವಂತನಿಂದ ಆಗುತ್ತಿದೆ. ದೇವರ ದಾಸಿಮಯ್ಯನೆಂಬ ಶಿವಶರಣ, "ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ತೀಡಿ ಬೀಸುವಗಾಳಿ ನಿಮ್ಮ ದಾನ" ಎನ್ನುತ್ತಾನೆ. ಇದನ್ನೇ ಈಶಾವಾಸ್ಯೋಪನಿಷತ್ತು "ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್" ಎಂದಿದೆ. ಹೀಗೆ ನಾವು ಆ ದೇವರಿಗೆ ಋಣಿಗಳು. ಇದೇ ದೇವ ಋಣ. ಇದನ್ನು ತೀರಿಸುವ ಸಲುವಾಗಿಯೇ ದೇವರ ಪೂಜೆ, ಪ್ರಾರ್ಥನೆ, ಜಪ ಮತ್ತು ಧ್ಯಾನಗಳ ಆಚರಣೆ.

ಎರಡನೆಯದು 'ಪಿತೃಋಣ'. ದೇವರು ನಮ್ಮ ಸೃಷ್ಟಿಕರ್ತನಾದರೆ ನಮ್ಮ ಜನ್ಮಕ್ಕೆ ಕಾರಣರಾದ ಪ್ರತ್ಯಕ್ಷ ದೇವತೆಗಳೆಂದರೆ ನಮ್ಮ ಮಾತಾಪಿತೃಗಳು. ಇಂದು ಅವರು ನಮ್ಮ ಕಣ್ಣಮುಂದೆ ಇರಬಹುದು ಅಥವಾ ಇಲ್ಲದೆಯೂ ಇರಬಹುದು. ಇದ್ದಾಗ ಅವರನ್ನು ಕಾಪಾಡುವುದು ನಮ್ಮ ಹೊಣೆ. ದೇಹಾತೀತರಾದ ಮೇಲೆ ಅವರ ಔರ್ಧ್ವದೈಹಿಕ ಕ್ರಿಯೆಗಳ ಮೂಲಕ ಸಲ್ಲಿಸುವ ಕೃತಜ್ಞತಾ ಸಮರ್ಪಣೆಯೇ ಪಿತೃಋಣದ ಪರಿಹಾರ.

ಮೂರನೆಯದೇ ಋಷಿ ಋಣ. ಹಿಂದಿನ ಋಷಿಗಳು ಅಧ್ಯಾತ್ಮ ವೀರರು. ನಮಗೆ ಮಾನವರಂತೆ ಬದುಕಲು ಕಲಿಸಿದವರು ೪ ವೇದಗಳು. ೧೦೮ ಉಪನಿಷತ್ತುಗಳು, ೧೮ ಪುರಾಣಗಳು, ಷಟ್ದರ್ಶನಗಳು, ಆಗಮತ್ರಯಗಳು, ಇತಿಹಾಸಕಾವ್ಯಗಳೇ ಆದಿಯಾಗಿ ಜ್ಞಾನನಿಧಿಯನ್ನೇ ಸಂಗ್ರಹಿಸಿಟ್ಟು ಹೋಗಿದ್ದಾರೆ. ಅದನ್ನೆಲ್ಲಾ ಅಧ್ಯಯನಮಾಡಿ ನಮ್ಮ ಜ್ಞಾನಪಿಪಾಸೆಯನ್ನು ತಣಿಸಿಕೊಂಡಿದ್ದೇವೆ. ಇದೇ ಋಷಿ ಋಣ.

ನಾವು ತಿಳಿದುಕೊಂಡಿರುವ ಈ ಜ್ಞಾನವನ್ನು ಪ್ರತಿಫಲಾಪೇಕ್ಷೆ ಇಲ್ಲದೆ ಇತರರಿಗೆ ಹೇಳಿದಾಗ ಮಾತ್ರ ಋಷಿ ಋಣ ತೀರುತ್ತದೆ. ಇದನ್ನೇ ಭಗವಂತ ಗೀತೆಯಲ್ಲಿ 'ಜ್ಞಾನಯಜ್ಞ' ಎಂದಿದ್ದಾನೆ.

"ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ" ಅಂದರೆ ಹಣವನ್ನು ದಾನ ಮಾಡುವುದಕ್ಕಿಂತಲೂ ಜ್ಞಾನದಾನ ಶ್ರೇಷ್ಠವಾದದ್ದು ಎಂಬುದು ಭಗವಂತನ ಮತ.

ಅಷ್ಟೇ ಅಲ್ಲದೆ ಇಂದಿನ ನಮ್ಮ ಜೀವನ ಸುಸೂತ್ರವಾಗಿ ನಡೆಯಬೇಕಾದರೆ ನಮಗಾಗಿ ಅನೇಕರು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ದುಡಿಯುತ್ತಿದ್ದಾರೆ. ನಾವು ಉಟ್ಟಿರುವ ಬಟ್ಟೆ, ತೊಟ್ಟಿರುವ ಆಭರಣ ಸೇವಿಸುತ್ತಿರುವ ಆಹಾರ, ನಾವಿರುವ ವಾಸಸ್ಥಳ - ಇವುಗಳ ಹಿಂದೆ ಅನೇಕರ ಶ್ರಮವಿದೆ. ಇದೇ 'ನೃಋಣ'.

ನಾವು ಈ ಪ್ರಪಂಚಕ್ಕೆ ಬರಿಗೈಗಳಿಂದ ಬಂದೆವು. ಎಲ್ಲ ಕಡೆಗಳಿಂದ ಸ್ವೀಕರಿಸುತ್ತಿದ್ದೇವೆ. ಹಾಗೆ ಸ್ವೀಕರಿಸಿದ್ದನ್ನು ನಮ್ಮದೇ ಆದ ರೀತಿಯಲ್ಲಿ ಮಾನವಕೋಟಿಗೆ ಹಿಂದಿರುಗಿಸುವುದೇ 'ನೃಯಜ್ಞ'. ಇದನ್ನೇ ಶ್ರೀ ಪುರಂದರದಾಸರು, "ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದವರಂತೆ ಕಾಣಿರೊ" ಎಂದು ಹಾಡಿದ್ದಾರೆ.

ಮನುಷ್ಯಮಾತ್ರವಲ್ಲ; ತಿರ್ಯಕ್ ಜಂತುಗಳಾದ ಎತ್ತು, ದನಕರುಗಳು, ಎಮ್ಮೆ ಕುದುರೆ, ಕತ್ತೆ, ನಾಯಿ, ಪಕ್ಷಿಗಳೂ ಸಹ ಮಾನವನಿಗೆ ಹಲವು ರೀತಿಯಲ್ಲಿ ಸಹಾಯಮಾಡುತ್ತಿವೆ. ಇದೇ 'ಭೂತ ಋಣ'. ಈ ಋಣವನ್ನು ಅವುಗಳ ಆರೈಕೆ, ರಕ್ಷಣೆ, ಪ್ರೀತಿ - ಇವುಗಳಿಂದ ತೀರಿಸಬೇಕು. ಇದನ್ನೇ ಸ್ಮೃತಿಕಾರರು 'ಪಂಚಮಹಾಯಜ್ಞ'ಗಳು ಎಂದು ಕರೆದಿದ್ದಾರೆ. ಹುಟ್ಟಿನಿಂದಲೇ ತಂದ ಋಣವನ್ನು ಹೀಗೆ ತೀರಿಸುವುದರ ಮೂಲಕ ನಾವು ಋಣಮುಕ್ತರಾಗಬಹುದು.

ಜನ್ಮದಿಂದ ಬಂದ ಪರೋಕ್ಷಋಣವನ್ನೇ ತೀರಿಸಬೇಕು ಎಂದಮೇಲೆ ಇನ್ನು ಪ್ರತ್ಯಕ್ಷವಾಗಿ ಮಾಡಿದ ಋಣವನ್ನಂತೂ ತೀರಿಸಲೇಬೇಕು. ಸಾಲಮಾಡುವುದು ಸುಲಭ. ಆದರೆ ತೀರಿಸುವುದು ಕಷ್ಟ. ಇದನ್ನೇ ಸರ್ವಜ್ಞನು, ಸಾಲವನು ಕೊಂಬಾಗ ಹಾಲೋಗರುಂಡಂತೆ ಸಾಲಿಗನು ಬಂದು ಎಳೆವಾಗ ಕಿಬ್ಬದಿಯ ಕೀಲು ಮುರಿದಂತೆ - ಎಂದು ಹೇಳಿದ್ದಾನೆ. ಏನೇ ಆದರೂ ಸರ್ವಪ್ರಯತ್ನೇನ ನಾವು ಋಣಮುಕ್ತರಾಗುವ ಕಡೆಗೆ ನಮ್ಮನ್ನು ನಡೆಸಲೆಂದು ಆ ಭಗವಂತನಲ್ಲಿ ಮೊರೆ ಇಡೋಣ.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ.
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್.
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ.

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ: ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ.

# ಉಪವಾಸ ವ್ರತ

---'ರಘುಸುತ'.

ಮಾನವನಿಗೆ ಒಳ್ಳೆಯದಾಗುವುದಕ್ಕಾಗಿ ಧರ್ಮ ಶಾಸ್ತ್ರಗಳಲ್ಲಿ ಅನೇಕ ವ್ರತಗಳನ್ನು ವಿವರಿಸಲಾಗಿದೆ. ಯಜ್ಞ, ತಪಸ್ಸು, ತೀರ್ಥಯಾತ್ರೆ ಇತ್ಯಾದಿ ಸಾಧನಗಳಂತೆ 'ಉಪವಾಸ ವ್ರತ'ವೂ ಒಂದಾಗಿದ್ದು, ಅದೂ ಒಂದು ಸಾಧನವಾಗಿದೆ.

ಉಪವಾಸ ವ್ರತವು ತುಂಬಾ ಮಹಿಮೆಯುಳ್ಳದ್ದಾಗಿದೆ. ಅಂತರ್ಯದ ಶುದ್ಧಿಗಾಗಿ ಈ ವ್ರತವು ತುಂಬಾ ಆವಶ್ಯಕವಾದುದಾಗಿದೆ. ಇದರಿಂದ ಬುದ್ಧಿಯ ವಿಕಾಸ, ವಿಚಾರಪರತೆಯ ಶುದ್ಧತೆ ಹಾಗೂ ಜ್ಞಾನಾಭಿವೃದ್ಧಿಯಾಗುತ್ತದೆ. ಮನಸ್ಸಿನಲ್ಲಿ ಪರಮಾತ್ಮನನ್ನು ಕುರಿತಾದ ಭಕ್ತಿ, ಶ್ರದ್ಧೆ ಹಾಗೂ ತಲ್ಲೀನತೆಯನ್ನು ಇದು ಉಂಟುಮಾಡುತ್ತದೆ. ಇದು ಪಾರಮಾರ್ಥಿಕ ಲಾಭದೊಂದಿಗೆ ಲೌಕಿಕ ಲಾಭವನ್ನೂ ನೀಡುತ್ತದೆ. ಇದು ಮನಸ್ಸನ್ನು ನಿರ್ಮಲವಾಗಿರಿಸುತ್ತದೆ. ಆಯುಃ ವೃದ್ಧಿಗೂ ಇದು ಸಹಾಯಕವಾಗುತ್ತದೆ.

ವ್ರತಗಳನ್ನು ಆಚರಿಸುವುದರಿಂದ ಕಾಯಕ, ವಾಚಿಕ, ಮಾನಸಿಕ ಹಾಗೂ ಸಾಂಸರ್ಗಿಕ ಪಾಪ, ಉಪಪಾಪ, ಮಹಾಪಾಪಗಳು ದೂರವಾಗುತ್ತವೆ.

## ವ್ರತವೆಂದರೇನು ?

ಪುಣ್ಯವನ್ನು ಪಡೆಯುವುದಕ್ಕಾಗಿ ಯಾವುದಾದರೊಂದು ಪುಣ್ಯತಿಥಿಯಂದು, ಉಪವಾಸ ಮಾಡುವುದು ಇಲ್ಲವೆ ಯಾವುದಾದರೊಂದು ಉಪವಾಸದ ಕರ್ಮಾನುಷ್ಠಾನದ ಮುಖಾಂತರ ಪುಣ್ಯ ಸಂಪಾದಿಸುವ ಸಂಕಲ್ಪ ವಿಧಾನಕ್ಕೆ 'ವ್ರತ' ಎಂದು ಕರೆಯಲಾಗುತ್ತದೆ.

ಯಮ - ನಿಯಮ ಹಾಗೂ ಶಮ - ದಯಾದಿಗಳನ್ನು ಪಾಲಿಸುವಿಕೆ, ಭೋಜನ ಇತ್ಯಾದಿಗಳನ್ನು ಪರಿತ್ಯಜಿಸುವಿಕೆ ಹಾಗೂ ಜಲಫಲ ಇವುಗಳ ಆಧಾರದ ಮೇಲೆ ಜೀವಿಸಿರುವುದು, ಸಮಸ್ತ ಭೋಗಗಳನ್ನು ತ್ಯಾಗಮಾಡುವುದು - ಇವೆಲ್ಲವೂ ವ್ರತದ ನಿಯಮಗಳು. ಇದನ್ನೇ 'ವ್ರತ' ಎಂದೂ ಕರೆಯುವರು.

ವ್ರತವನ್ನು ಮಾಡುವವನು ಶಾರೀರಿಕ ಕಷ್ಟಗಳನ್ನು ಸಹಿಸಬೇಕಾಗುತ್ತದೆ. ಅದರಿಂದ ಇದನ್ನು **'ತಪಸ್ಸು'** ಎಂದು ಕರೆಯಲಾಗುತ್ತದೆ. ಇಂದ್ರಿಯ ನಿಗ್ರಹವನ್ನು 'ದಮ' ಎಂದೂ, ಮನೋನಿಗ್ರಹವನ್ನು 'ಶಮ' ಎಂದು ಕರೆಯಲಾಗುತ್ತದೆ.

ವ್ರತದಲ್ಲಿ ಇಂದ್ರಿಯಗಳ ಸಂಯಮವನ್ನು ತೋರಬೇಕಾಗುತ್ತದೆ. ಅದರಿಂದ ಇದನ್ನು 'ನಿಯಮ' ಎಂದು ಕರೆಯಲಾಗುತ್ತದೆ.

ಮೇಲ್ವರ್ಗದವರು ವಿಧಿಪೂರ್ವಕ ಅಗ್ನಿಹೋತ್ರ, ಸೋಮಯಜ್ಞ, ಹವಿರ್ಯಜ್ಞ ಹಾಗೂ ಪಾಕಯಜ್ಞ ಇತ್ಯಾದಿಗಳನ್ನು ಪಾಲಿಸಲು ಅಸಮರ್ಥರಾದವರು; ವ್ರತ, ಉಪವಾಸ ಹಾಗೂ ನಿಯಮಗಳನ್ನು ಅನುಸರಿಸಬೇಕಾದುದು 'ಕಲ್ಯಾಣಕಾರೀ ಕಾರ್ಯ' ಗಳಾಗಿವೆ. ಇವುಗಳನ್ನು ಪಾಲಿಸುವುದರಿಂದ ದೇವಗಣವು ತೃಪ್ತರಾಗಿ, ಪ್ರಸನ್ನರಾಗಿ, 'ವ್ರತಿ'ಗಳಿಗೆ ದೇವಗಣವು ಮೋಕ್ಷವನ್ನು ಪ್ರದಾನ ಮಾಡುವುದು.

ಕ್ಷಮಾ ಸತ್ಯಂ ದಯಾ ದಾನಂ
ಶೌಚಮಿಂದ್ರಿಯ ನಿಗ್ರಹಃ
ದೇವಪೂಜಾಗ್ನಿ ಹರಣಂ
ಸಂತೋಷೋಽಸ್ತೇಯ ಮೇವ ಚ
ಸರ್ವ ವ್ರತೇಷ್ವಯಂ ಧರ್ಮಃ
ಸಾಮಾನ್ಯೋ ದಶಧಾ ಸ್ಮೃತಃ
(ಅಗ್ನಿ ೧೭೫-೧೦-೧೧)

ಕ್ಷಮೆ, ಸತ್ಯ, ದಯೆ, ದಾನ, ಶೌಚ, ಇಂದ್ರಿಯ ನಿಗ್ರಹ, ದೇವಪೂಜೆ, ಹವನ, ಸಂತೋಷ ಹಾಗೂ ಕಳ್ಳತನ ಮಾಡದೆ ಇರುವುದು - ಈ ನಿಯಮಗಳನ್ನು ಸಾಮಾನ್ಯವಾಗಿ ಎಲ್ಲ ವ್ರತಗಳಲ್ಲೂ ಪಾಲಿಸಬೇಕಾದುದು ಅವಶ್ಯಕ.

ಆದುದರಿಂದ ಎಲ್ಲ ಪಾಪಗಳಿಂದ ದೂರವಾಗಿ ಎಲ್ಲರೀತಿಯ ಭೋಗಗಳನ್ನು ತ್ಯಾಗಮಾಡಿ, ಸದ್ಗುಣಗಳನ್ನು ಹೊಂದಿ ಜೀವನ ನಿರ್ವಹಣೆಮಾಡುವ ರೀತಿಯನ್ನು 'ಉಪವಾಸ' ಎಂದು ಕರೆಯಲಾಗುವುದು.

## ಉಪವಾಸವನ್ನು ಹೇಗೆ ಆಚರಿಸುವುದು

ಉಪವಾಸ ಮಾಡುವ ವ್ರತಧಾರಿಯು ಮೊದಲು ಸ್ನಾನಾದಿಕ್ರಿಯೆಗಳಿಂದ ಶುದ್ಧನಾಗಿ, ದೇವ, ಗುರು, ಬ್ರಾಹ್ಮಣ, ಸಾಧು, ಗೋವಿನ ಪೂಜೆ ಮಾಡಬೇಕು. ಸತ್ಸಂಗ ಸೇವನ, ಭಗವತ್ ಕಥಾಶ್ರವಣ, ದಾನ ಪುಣ್ಯ ಇತ್ಯಾದಿಗಳ ಕಾರ್ಯಕವನ್ನು ತಪ್ಪದೆ ನೆರವೇರಿಸಬೇಕು.

ಜಲ, ಫಲ, ಮೂಲ (ಕಂದಮೂಲ), ಮೊಸರು, ಹವಿಸ್ಸು, ಬ್ರಾಹ್ಮಣನ ಇಚ್ಛೆ, ಔಷಧಿ ಹಾಗೂ ಪೂಜ್ಯರ ವಚನಗಳು - ಈ ಎಂಟು ವಿಧಾನಗಳಿಂದ ವ್ರತವು ನಷ್ಟವಾಗುವುದಿಲ್ಲ.

ಹೋಮದ ಅವಶೇಷದ ಪಾಯಸ, ಭಿಕ್ಷಾನ್ನ, ತಂಬಿಟ್ಟು, ತೃಣಪುಷ್ಪ, ಜವೆಗೋಧಿ, ಹಸಿ ತರಕಾರಿ, ಹಸುವಿನ ಹಾಲು, ಮೊಸರು, ತುಪ್ಪ, ಕಂದಮೂಲ, ಮಾವಿನ ಹಣ್ಣು, ದಾಳಿಂಬೆ, ಕಿತ್ತಳೆ ಹಣ್ಣು ಹಾಗೂ ಕದಲೀಫಲಗಳು ವ್ರತದ ಸಮಯದಲ್ಲಿ ಸೇವಿಸಲು ಯೋಗ್ಯವಾದವುಗಳಾಗಿವೆ.

ವ್ರತ ಮಾಡುವವನು ತಾಮಸೀ ವಸ್ತುಗಳ ಸೇವನೆ, ಸ್ತ್ರೀ - ಸಂಪರ್ಕ, ಅಲಂಕಾರ, ಶೃಂಗಾರ ಸಾಧನಗಳಿಂದ ಯಾವಾಗಲೂ ದೂರವಿರಬೇಕು. ಸಲ ಸಲಕ್ಕೂ ನೀರು ಕುಡಿಯುವುದು, ಹಗಲಿನಲ್ಲಿ ನಿದ್ದೆ ಮಾಡುವುದು ಹಾಗೂ ಮೈಥುನಗಳ ಸಹವಾಸದಿಂದ ವ್ರತಮಾಡುವವನು ಕಲುಷಿತಗೊಳ್ಳುತ್ತಾನೆ. ಆದುದರಿಂದ ಅವು ನಿಷಿದ್ಧ. ಪವಿತ್ರನಾಗಿದ್ದು, ವ್ರತವನ್ನು ಕಟ್ಟುನಿಟ್ಟಾಗಿ ಅನುಷ್ಠಾನ ಮಾಡಿದಲ್ಲಿ, ವ್ರತ ಮಾಡುವವನಿಗೆ ಪರಮ ಕಲ್ಯಾಣವಾಗುತ್ತದೆ.

## ವ್ರತ ಮಾಡಲು ಅರ್ಹರು

ನಿಜವರ್ಣಾಶ್ರಮಾಚಾರ
ನಿರತಃ ಶುದ್ಧಮಾನಸಃ
ಅಲುಬ್ಧಃ ಸತ್ಯವಾದೀ ಚ
ಸರ್ವ ಭೂತಹಿತೇ ರತಃ
ಪೂರ್ವ ನಿಶ್ಚಯ ಮಾಶ್ರಿತ್ಯ
ಯಥಾವತ್ ಕರ್ಮ ಕಾರಕಃ
ಅವೇದನಿಂದಕೋ ಧೀಮಾ
ನಧಿಕಾರೀ ವ್ರದಾಧಿಷು (ಸ್ಕಂದಪುರಾಣ)

ಯಾರು ತಮ್ಮ ವರ್ಣಾಶ್ರಮದ ನಿಯಮಾನುಸಾರ ಆಚಾರ ವಿಚಾರಗಳಲ್ಲಿ ನಿರತರಾಗಿರುವರೊ, ಯಾರು ನಿಷ್ಕಪಟರು, ನಿರ್ಲೋಭಿ, ಸತ್ಯವಾದೀ, ಎಲ್ಲ ಪ್ರಾಣಿವರ್ಗಗಳ ಹಿತವನ್ನು ರಕ್ಷಿಸುವರೊ, ಯಾರು ವೇದಗಳ ಅನುಯಾಯಿಗಳೊ, ಬುದ್ಧಿವಂತರೊ ಹಾಗೂ ಮೊದಲೇ ನಿಶ್ಚಯಿಸಿಕೊಂಡಂತೆ ಯಥಾವತ್ ಕರ್ಮಗಳನ್ನು ನಡೆಸುವರೊ - ಇಂತಹ ಗುಣಗಳನ್ನು ಹೊಂದಿರುವ ಸಂಪನ್ನ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
## ತಿರುಮಲೆ

# ನೂತನ ಆರ್ಜಿತಸೇವೆಗಳು

ತಿರುಮಲೆಯ ಆಲಯದಲ್ಲಿ ಯಾತ್ರಿಕರ ಅನುಕೂಲಕ್ಕಾಗಿ ಹೊಸ ರೀತಿಯ ಆರ್ಜಿತ ಸೇವೆಗಳನ್ನು ಪ್ರವೇಶಗೊಳಿಸಲಾಗಿದೆ. ಅವುಗಳ ವಿವರಗಳು ಈ ಕೆಳಕಂಡಂತಿವೆ.

| ಸೇವೆಯ ಹೆಸರು | ಶುಲ್ಕ | ಪ್ರಸಾದ | ಪ್ರವೇಶಾವಕಾಶ |
|---|---|---|---|
| 1. ಕಿರಿಯ ಲಾಡು ಪಡಿಸೇವೆ | ರೂ. 250 | 10 ಕಿರಿಯಲಾಡು | ಇಬ್ಬರಿಗೆ |
| 2. ಆರ್ಜಿತ ಲಾಡು ಪಡಿ | ರೂ. 2500 | 30 ದೊಡ್ಡ ಲಾಡು | ಐವರಿಗೆ |
| 3. ಪ್ರೋಕ್ತಂ ಲಾಡು ಪಡಿ | ರೂ. 750 | 30 ಕಿರಿಯ ಲಾಡು | ಐವರಿಗೆ |
| 4. ಅರ್ಚನಾನಂತರ ದರ್ಶನ | ರೂ. 100 | -- | ಒಬ್ಬರಿಗೆ |

ಸರ್ವದರ್ಶನದ ಸಮಯದಲ್ಲಿ ವೈಕುಂಠಂ ಕ್ಯೂಕಾಂಪ್ಲೆಕ್ಸ್ ಮೂಲಕ ದರ್ಶನಕ್ಕೆ ಅನುಮತಿಸಲಾಗುವುದು. ಶುಲ್ಕವನ್ನು ತಿರುಮಲೆಯ ವಿಜಯಾ ಬ್ಯಾಂಕ್ ಕೌಂಟರಿನಲ್ಲಿ ಸಲ್ಲಿಸಬೇಕು.

ಅರ್ಚನಾನಂತರ ದರ್ಶನದ ಟಿಕೆಟ್‌ಗಳನ್ನು ತಿರುಮಲೆಯ ವಿಜಯಾಬ್ಯಾಂಕ್ ಕೌಂಟರಿನಲ್ಲಿ ಕೊಂಡುಕೊಳ್ಳಬಹುದು. ಶುಕ್ರವಾರಗಳ ಹೊರತು ಮಿಕ್ಕ ದಿನಗಳಲ್ಲಿ ಅನುಮತಿಸಲಾಗುವುದು. (ನಿಜಪಾದದರ್ಶನ ಸೇವೆಯ ರೀತಿಯಲ್ಲಿ) ಈ ಸೇವೆಯ ಕಾಲಾವಧಿ 30 ರಿಂದ 45 ನಿಮಿಷ ಕಾಲ ಮಾತ್ರವೇ ಆದ್ದರಿಂದ ಒಂದು ದಿನದಲ್ಲಿ ಸಾಮಾನ್ಯವಾಗಿ 750 ಟಿಕೆಟಗಳನ್ನು ಮಾತ್ರ ನೀಡಲಾಗುವುದು ಹಾಗೂ ದೇವಾಲಯದ ಅಧಿಕಾರಿಗಳು ಈ ಸೇವೆಯನ್ನು ದೇವಾಲಯದ ಇತರ ಅಗತ್ಯಗಳಿಗೆ ತಕ್ಕಂತೆ ಒಂದು ದಿನ ಅಥವಾ ಹೆಚ್ಚು ದಿನಗಳ ಕಾಲ ನಿಲ್ಲಿಸುವ ಅಧಿಕಾರ ಪಡೆದಿರುತ್ತಾರೆ.

ಯಾತ್ರಿಕರು ಈ ಅವಕಾಶಗಳನ್ನು ಬಳಸಿಕೊಳ್ಳಬೇಕಾಗಿ ವಿನಂತಿ.

**ತಿ.ತಿ.ದೇ.**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಸ್ತ್ರೀ - ಪುರುಷರೆಲ್ಲರೂ ಈ ವ್ರತವನ್ನು ಆಚರಿಸಲು ಅರ್ಹರಾಗಿರುತ್ತಾರೆ. ಪತಿವ್ರತಾ ಸ್ತ್ರೀಯರು ಮಾತ್ರ ವ್ರತದ ದೀಕ್ಷೆಯನ್ನು ಪಡೆಯಲು ಪತಿಯ ಆಜ್ಞೆಯನ್ನು ಪಡೆಯಬೇಕೆಂದು ಶಾಸ್ತ್ರಗಳು ತಿಳಿಸುತ್ತವೆ.

## ವ್ರತವನ್ನು ಹೇಗೆ ಪಾಲಿಸುವುದು?

ಅನೇಕ ರೀತಿಯ ವ್ರತಗಳಿವೆ. ಇವುಗಳಲ್ಲಿ ಮುಖ್ಯವಾದುವು ನಿತ್ಯ, ನೈಮಿತ್ತಿಕ ಹಾಗೂ ಕಾಮ್ಯ- ಎಂಬವು.

ಎಲ್ಲ ವ್ರತಗಳನ್ನೂ ಪ್ರಾರಂಭ ಮಾಡುವುದಕ್ಕೆ ಮುಂಚೆ ಪರಮಾತ್ಮನನ್ನು ಪೂಜಿಸಬೇಕು. ನಂತರ ವ್ರತದಲ್ಲಿ ಪಾಲ್ಗೊಳ್ಳಲು ಆತನ ಅನುಮತಿಯನ್ನು ಬೇಡಬೇಕು. ಇದರೊಂದಿಗೆ ಮಾನಸ - ಪೂಜೆಯಿಂದ ಕೂಡಿದ ಪ್ರಾರ್ಥನೆಯನ್ನು ಸಲ್ಲಿಸಬೇಕು.

ಸ್ನಾನಾದಿಗಳನ್ನು ಮಾಡಿ, ಪಂಚಗವ್ಯ ಇತ್ಯಾದಿ ತೀರ್ಥಗಳನ್ನು ಸೇವಿಸಿ ಶುದ್ಧರಾಗಬೇಕು. ನಂತರ ವ್ರತಕ್ಕೆ ಸಂಬಂಧಪಟ್ಟ ದೇವರನ್ನು ಹೀಗೆಂದು ಪ್ರಾರ್ಥಿಸಬೇಕು--

"ಹೇ ವ್ರತಪತೇ! ಸಂತಾನ ಇತ್ಯಾದಿ ಸೌಭಾಗ್ಯಕ್ಕಾಗಿ, ಆರೋಗ್ಯ ಅಭಿವೃದ್ಧಿ, ನಿರ್ಮಲತೆ ಹಾಗೂ ಮೋಕ್ಷಕ್ಕಾಗಿ ನಾನು ಈ ವ್ರತವನ್ನು ಅನುಷ್ಠಾನ ಮಾಡುತ್ತಿದ್ದೇನೆ. ಈ ಶ್ರೇಷ್ಠ ವ್ರತವನ್ನು ನಾನು ನಿನ್ನ ಸಮಕ್ಷಮ ಪ್ರಾರಂಭಿಸುತ್ತಿದ್ದೇನೆ. ಜಗತ್ಪತೇ! ನಿನ್ನ ಅನುಗ್ರಹದಿಂದ ಇದರಲ್ಲಿ ನಿರ್ವಿಘ್ನ ಸಿದ್ಧಿಯು ಪ್ರಾಪ್ತ

ವಾಗಲೆಂದು ಪ್ರಾರ್ಥಿಸುತ್ತೇನೆ. ಸಂತರನ್ನು ಪ್ರೋ
ಸುವವನೇ! ಈ ಶ್ರೇಷ್ಠವ್ರತವನ್ನು ಸ್ವೀಕರಿಸಿದ ನಂ
ಇದನ್ನು ಪೂರ್ತಿ ಮಾಡುವುದಕ್ಕೆ ಮುಂಚೆ
ನಾನಾ ಮರಣಿಸಿದಲ್ಲಿ ಅದು ನಿನ್ನ ಅನುಗ್ರಹದಿ
ಪೂರ್ತಿಯಾಗುವಂತೆ ಮಾಡು. ಕೇಶವ! ನಿ
ವ್ರತ ಸ್ವರೂಪನು, ಜಗತ್ತಿನ ಉತ್ಪತ್ತಿಯ ಪ್ರೇರ
ಅಂತೆಯೇ ಜಗತ್ತಿಗೆ ಶುಭವನ್ನು ಮಾಡುವವ
ನನ್ನ ಎಲ್ಲ ಮನೋರಥಗಳ ಸಿದ್ಧಿಗಾಗಿ ಈ
ದಲ್ಲಿ ನಿನ್ನನ್ನು ಆವಾಹನೆ ಮಾಡುವವನಾಗಿದ್ದೆ
ಅದಕ್ಕಾಗಿ ನೀನು ನನ್ನ ಹತ್ತಿರವೇ ಇರು.
ಸ್ಸಿನ ಮುಖಾಂತರ ಪ್ರಸ್ತುತ ಪಡಿಸುವ ಪಂಚ
ಪಂಚಾಮೃತ ಹಾಗೂ ಶುದ್ಧ ಜಲದ ಮುಖಾಂ
ಭಕ್ತಿಪೂರ್ವಕವಾಗಿ ನಿನಗೆ ಸ್ನಾನ ಮಾಡಿಸುವೆ
ನನ್ನ ಪಾಪಗಳನ್ನು ನಾಶಮಾಡುವವನಾಗು. ಅ
ಪತೆ! ಗಂಧ, ಪುಷ್ಪ ಹಾಗೂ ಜಲದಿಂದ ಕೂ
ಉತ್ತಮ ಅರ್ಘ್ಯ ಹಾಗೂ ಪಾದ್ಯಗಳನ್ನು ಸ್ವೀಕ
ವಂತಹವನಾಗು. ಆಚಮನವನ್ನು ಮಾಡು, ನ
ಸಮ್ಮಾನಕ್ಕೆ ಯೋಗ್ಯನನ್ನಾಗಿ ಮಾಡು. ಹೇ ವ್ರತ
ಸ್ವಾಮಿಯೇ! ಪವಿತ್ರವಾದ ಈ ವಸ್ತ್ರವನ್ನು
ರಿಸು. ಅಂತೆಯೇ ನನ್ನನ್ನು ಸುಂದರ ವಸ್ತ್ರ
ಹಾಗೂ ಆಭೂಷಣಾದಿಗಳು ಸದಾ ಅಲಂಕರಿ
ವಂತೆ ಮಾಡು. ಗಂಧಸ್ವರೂಪಿ ಪರಮಾತ್ಮ! ನಿ
ಲವಾದ ಉತ್ತಮ ಸ್ವರೂಪದ, ಸುಗಂಧಿತವ
ಚಂದನವನ್ನು ಸ್ವೀಕರಿಸಿ, ನನಗೆ ಪುಣ್ಯದ ಸುಗ
ದಿಂದ ಯುಕ್ತನಾಗುವಂತೆ ಮಾಡು. ಪರಮ
ಈ ಪುಷ್ಪಗಳನ್ನು ತೆಗೆದುಕೊ. ಸದಾಕಾಲ
ಫಲಪುಷ್ಪಾದಿಗಳಿಂದ ನನ್ನನ್ನು ಪರಿಪೂರ್ಣನ
ಮಾಡು. ಈ ಹೂವಿನ ನಿರ್ಮಲ ಸುಗಂಧದಿ
ಕೂಡಿದ ಸುಗಂಧಿತ ಆಯುಸ್ಸು ಹಾಗೂ ಆ
ಗ್ಯಗಳು ವೃದ್ಧಿಯಾಗುವಂತೆ ಮಾಡು. ನ
ಸ್ವಾಮಿಯೆ! ಗುಗ್ಗಳ ಹಾಗೂ ತುಪ್ಪದ ಮಿ
ದಿಂದ ಕೂಡಿದ ಈ ದಶಾಂಗ ಧೂಪವನ್ನು
ರಿಸು. ಧೂಪದ ಮುಖಾಂತರ ಪೂಜಿಸ
ಹೇ ಪರಮೇಶ್ವರ! ನೀನು ನನ್ನನ್ನು ಉ
ಧೂಪದ ಸುಗಂಧದಿಂದ ಸಂಪನ್ನನನ್ನಾಗಿ ಮಾ
ದೀಪ ಸ್ವರೂಪ ದೇವನೆ! ಎಲ್ಲರನ್ನೂ, ಎಲ್ಲವ
ಪ್ರಕಾಶಗೊಳಿಸುವ ಈ ಪ್ರಕಾಶಪೂರ್ಣ ದೀ
ಜ್ವಾಲೆಯ ಶಿಖಿಯು ಮೇಲ್ ಮುಖನಾಗಿ ಜ್ವ
ತ್ತಿದೆ. ಅದನ್ನು ನೀನು ಗ್ರಹಿಸು. ಅದೇ ರೀತಿ
ನನ್ನನ್ನು ಪ್ರಕಾಶಮಾನನನ್ನಾಗಿ ಮಾಡಿ, ಊರ್ಧ್ವ
ತಿಯನ್ನು ಅನುಗ್ರಹಿಸು. ಅನ್ನ ಇತ್ಯಾದಿ ಉ
ವಸ್ತುಗಳ ಅಧೀಶ್ವರನೆ! ಈ ಅನ್ನ ಇತ್ಯಾ
ಳನ್ನು ಸ್ವೀಕರಿಸು. ಪ್ರತಿಯಾಗಿ ಅನ್ನಾದಿಗ
ಹೊಂದಿದವನಾಗಿ, ಅನ್ನದಾತನೂ ಸರ್ವಸ್ವ

ದಾನ ಮಾಡುವಂತಹವನೂ ಆಗಿರುವಂತೆ ಅನುಗ್ರಹಿಸು. ಪ್ರಭೋ! ವ್ರತದ ಮುಖಾಂತರದ ಆರಾಧ್ಯ ದೈವವೆ! ಮಂತ್ರ, ವಿಧಿ ಹಾಗೂ ಭಕ್ತಿಗಳಿಲ್ಲದೆಯೆ ನಾನು ನಿನ್ನನ್ನು ಪೂಜಿಸುತ್ತಿದ್ದೇನೆ. ನಿನ್ನ ಕೃಪೆಯಿಂದ ಈ ಪೂಜೆಯು ಪರಿಪೂರ್ಣವೂ, ಸಫಲವಾದುದೂ ಆಗಲಿ. ನೀನು ನನಗೆ ಧರ್ಮ, ಧನ, ಸೌಭಾಗ್ಯ ಗುಣ, ಸಂತತಿ, ಕೀರ್ತಿ, ವಿದ್ಯೆ, ಆಯುಸ್ಸು ಹಾಗೂ ಮೋಕ್ಷವನ್ನು ನೀಡುವಂತಹವನಾಗು. ವ್ರತಪತಿಯೆ! ಈಗ ನನ್ನ ಮುಖಾಂತರ ನಡೆಸಲಾಗುತ್ತಿರುವ ಈ ಪೂಜೆಯನ್ನು ಸ್ವೀಕರಿಸಿ, ಮತ್ತೆ ಇಲ್ಲಿಗೆ ದಯಮಾಡಿಸಲು ಹಾಗೂ ವರದಾನ ಮಾಡಲು ಅನುಗ್ರಹಮಾಡು." (ಅಗ್ನಿ ೭೫-೪೪-೫೮)

ಈ ರೀತಿಯಲ್ಲಿ ಭಗವತ್ಪ್ರಾರ್ಥನೆ ಪಡೆದು, ವ್ರತದಲ್ಲಿ ನಿರತರಾಗಬೇಕು. ಯಾವುದಾದರೂ ವಿಶೇಷ ವ್ರತೋಪವಾಸವನ್ನು ಪ್ರಾರಂಭಿಸಬೇಕೆಂದಿದ್ದರೆ, ಅದನ್ನು ಶುಭಮುಹೂರ್ತದಲ್ಲಿ, ಶುಭಕಾಲದಲ್ಲಿ ಪ್ರಾರಂಭಮಾಡಬೇಕು.

ವ್ರತದ ಕೆಲವು ಸಾಮಾನ್ಯ ನಿಯಮಗಳೂ ಇವೆ. ಇವನ್ನು ವಿಶೇಷ ವ್ರತಗಳಲ್ಲಿ ಉಪಯೋಗಿಸಬೇಕಾಗಿದೆ.

ವ್ರತದ ಪ್ರಾರಂಭದಲ್ಲಿ ವ್ರತ ಮಾಡುವವರು ಕ್ಷೌರಾದಿಕೃತ್ಯಗಳನ್ನು ಮುಗಿಸಿ, ಸ್ನಾನಾದಿಗಳಿಂದ ನಿವೃತ್ತಿ ಪಡೆಯಬೇಕು. ಗಣಪತಿ, ಶ್ರೀ ಮಾತೆ, ಪಂಚದೇವ (ಗಣೇಶ, ಸೂರ್ಯ, ವಿಷ್ಣು, ಶಿವ, ದುರ್ಗಾ) ಇವರುಗಳ ಪೂಜೆಯನ್ನು ಮಾಡಬೇಕು.

ನಂತರ ವ್ರತದೇವತೆಯ ಸ್ವರ್ಣಮಾಯಿಾ ಮೂರ್ತಿಯನ್ನು ನಿರ್ಮಿಸಿ, ಅದನ್ನು ಕಳಶದ ಮೇಲೆ ಪ್ರತಿಷ್ಠಾಪಿಸಿ, ಪಂಚೋಪಚಾರ, ದಶೋಪಚಾರ, ಹಾಗೂ ಷೋಡಶೋಪಚಾರದ ಮುಖಾಂತರ ಪೂಜೆಯನ್ನು ಮಾಡಬೇಕು. ಯಾವ ತಿಂಗಳು, ಪಕ್ಷ, ತಿಥಿ, ವಾರ ಹಾಗೂ ನಕ್ಷತ್ರದಂದು ವ್ರತವನ್ನು ಮಾಡಬೇಕಾಗಿದೆಯೊ ಅವುಗಳ ಅಧಿಷ್ಠಾತಾ ದೈವವು ಆ ವ್ರತದ ಉಪಾಸ್ಯ ದೇವತೆಯಾಗಿರುತ್ತದೆ.

ಮೇಲೆ ಹೇಳಿದ ರೀತಿಯಲ್ಲಿ, ಯಥಾವಿಧಿ ವ್ರತವನ್ನು ಮಾಡಿ, ಅದು ಪೂರ್ತಿಯಾದ ನಂತರ, ಉದ್ಯಾಪನವನ್ನು ಮಾಡಬೇಕು.

ವ್ರತವನ್ನು ಪ್ರಾರಂಭಿಸಿದ ನಂತರ ಕ್ರೋಧ, ಲೋಭ, ಮೋಹ ಅಥವಾ ಆಲಸ್ಯದ ಪರಿಣಾಮವಾಗಿ ಅರ್ಧಕ್ಕೆ ಬಿಟ್ಟಲ್ಲಿ, ಪಾಪ ಉಂಟಾಗುವುದು ಎಂಬುದನ್ನು ವ್ರತ ಮಾಡುವವರು ನೆನಪಿನಲ್ಲಿ ಇಟ್ಟುಕೊಳ್ಳಬೇಕು. ಮೂರು ದಿನಗಳವರೆಗೆ ಅನ್ನವನ್ನು ತ್ಯಜಿಸಿ, ತದನಂತರದಲ್ಲಿ ಮತ್ತೆ ಹೊಸದಾಗಿಯೇ ವ್ರತವನ್ನು ಪ್ರಾರಂಭಿಸಬೇಕು-

ಕ್ರೋಧಾತ್ ಪ್ರಮಾದಾಲ್ಲೋಭಾತ್
ವ್ರತ ಭಂಗೋ ಭವೇದ್ಯದಿ
ದಿನತ್ರಯಂ ನ ಭುಂಜೀತ
ಶಿರಸೋ ಮುಂಡನಂ ಭವೇತ್

(ಗ.ಪು.ಪೂ. ೧೩೬-೧೯)

ವ್ರತದಲ್ಲಿ, ತೀರ್ಥಯಾತ್ರೆ ಹಾಗೂ ಶ್ರಾದ್ಧದಲ್ಲಿ ಅತಿಥಿಗಳ ಊಟವಾದ ನಂತರ ಉಳಿದಿರುವ ಅನ್ನವನ್ನು ಪ್ರಸಾದವೆಂದು ತಿಳಿದು ಸ್ವೀಕರಿಸಬೇಕು. ಇದೇ ಅವರ ಅನ್ನವಾಗುತ್ತದೆ. ಇದರಿಂದ ಪುಣ್ಯಪ್ರಾಪ್ತಿಯಾಗುತ್ತದೆ.

ಆಪತ್ತಿನ ಸಂದರ್ಭಗಳಲ್ಲಿ ಅಥವಾ ಆವಶ್ಯಕ ಪರಿಸ್ಥಿತಿಗಳಲ್ಲಿ ವ್ರತಾದಿ ಧರ್ಮಕಾರ್ಯಗಳನ್ನು ಸ್ವತಃ ಮಾಡಲು ಸಾಧ್ಯವಿಲ್ಲದಿದ್ದಾಗ ಪತಿ, ಪತ್ನಿ, ಪುತ್ರ, ಪುರೋಹಿತ, ಸಹೋದರ ಅಥವಾ ಮಿತ್ರರನ್ನು ಪ್ರತಿನಿಧಿಯನ್ನಾಗಿ ಮಾಡಿಕೊಂಡು, ಅವರ ಮುಖಾಂತರ ನೆರವೇರಿಸಬಹುದು.

ಒಂದು ವೇಳೆ ಮೇಲೆ ತಿಳಿಸಿದಂತಹ ಪ್ರತಿನಿಧಿಯು ದೊರೆಯದೆ ಇದ್ದಲ್ಲಿ ಯಾರಾದರೊಬ್ಬ ನಿಷ್ಠಾವಂತ ಬ್ರಾಹ್ಮಣನ ಮುಖಾಂತರ ಮಾಡಿಸಬಹುದಾಗಿದೆ.

## ವ್ರತಗಳ ಭೇದಗಳು

ಅನೇಕ ರೀತಿಯ ವ್ರತಗಳಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ - ಕಾಯಕ, ವಾಚಿಕ, ಮಾನಸಿಕ, ನಿತ್ಯ ನೈಮಿತ್ತಿಕ, ಕಾಮ್ಯ, ಏಕಭುಕ್ತ, ಅಯಾಚಿತ, ಮಿತಭುಕ್ತ, ಪ್ರಾಜಾಪತ್ಯ ಎಂಬವುಗಳು.

೧. ಕಾಯಕ : ಶಸ್ತ್ರಾಘಾತ, ಮಾರ್ಮಾಘಾತ, ಕಾರ್ಯಹಾನಿ - ಇತ್ಯಾದಿಗಳ ಮುಖಾಂತರ ಉಂಟಾಗುವ ಹಿಂಸೆಯನ್ನು ತ್ಯಜಿಸುವುದೇ ಕಾಯಕ.

೨. ವಾಚಿಕ : ನಿಜವನ್ನೇ ಹೇಳುವುದು, ಪ್ರಾಣಿಗಳೊಂದಿಗೆ ಸ್ನೇಹದಿಂದಿದ್ದು ಅವುಗಳೊಂದಿಗಿನ ದ್ವೇಷವನ್ನು ದೂರ ಮಾಡುವುದಕ್ಕೆ ವಾಚಿಕ ಎನ್ನುವರು.

೩. ಮಾನಸಿಕ : ಮನಸ್ಸಿಗೆ ಶಾಂತಿ ಸಿಗುವಂತೆ ಮಾಡುವ ರೀತಿಗೆ, ಮಾನಸಿಕ ದೃಢನಿರ್ಧಾರವನ್ನು ಅವಲಂಬಿಸಿರುವ ಕಾರ್ಯಗಳನ್ನು ನಿರ್ವಹಿಸುವುದಕ್ಕೆ 'ಮಾನಸಿಕ' ಎನ್ನುವರು.

೪. ನಿತ್ಯವ್ರತ : ಪುಣ್ಯವನ್ನು ಸಂಪಾದಿಸುವುದಕ್ಕಾಗಿ ಏಕಾದಶಿಯಂದು, ಉಪವಾಸವಿದ್ದು, ಭಗವನ್ನಾಮ ಸ್ಮರಣೆ, ನಿತ್ಯಕೆಲಸಕಾರ್ಯಗಳನ್ನು ಮಾಡಿಕೊಂಡು ಹೋಗುವ ರೀತಿಗೆ 'ನಿತ್ಯವ್ರತ'ವೆನ್ನುವರು.

೫ ನೈಮಿತ್ತಿಕ ವ್ರತ : ಪಾಪಕ್ಷಯಕ್ಕಾಗಿ ಚಾಂದ್ರಾಯಣ, ಪ್ರದೋಷ - ಇತ್ಯಾದಿ ದಿನಗಳಂದು ನಿಮಿತ್ತಕ್ಕಾಗಿ ಮಾಡುವ ಉಪವಾಸ ವ್ರತವನ್ನು ನೈಮಿತ್ತಿಕ ವ್ರತವೆಂದು ಕರೆಯುತ್ತಾರೆ. ಗ್ರಹಣಸ್ನಾನ; ಪಾಪ ಪರಿಹಾರಕ್ಕಾಗಿ ಮಾಡುವ ದಾನ; ರಜಸ್ವಲಾದಿ ಸ್ಪರ್ಶ, ಅಬುದ್ಧಿಕೃತ ಪಾಪಕಾರ್ಯ ಮುಂತಾದ ಕಾರಣಗಳಿಂದ ಮಾಡಿಕೊಳ್ಳುವ ಪ್ರಾಯಶ್ಚಿತ್ತವು ನೈಮಿತ್ತಿಕ.

೬. ಕಾಮ್ಯವ್ರತ : ಫಲಾಪೇಕ್ಷೆಯಿಂದ ಮಾಡುವ ವ್ರತವಿದು. ಸುಖ ಸೌಭಾಗ್ಯಾದಿಗಳು ಲಭಿಸಲಿ ಎನ್ನುವ ಇಷ್ಟದಿಂದ, ಗುರಿಯಿಂದ, ಈ ವ್ರತವನ್ನು ಆಚರಿಸಲಾಗುತ್ತದೆ.

ಇವುಗಳಲ್ಲಿ ದ್ರವ್ಯ ವಿಶೇಷದ ಭೋಜನ ಹಾಗೂ ಪೂಜೆಗಳು - ಇತ್ಯಾದಿ ಸಾಧನಗಳ ಮುಖಾಂತರ ಮಾಡುವ ಸಾಧ್ಯವ್ರತವು 'ಪ್ರವೃತ್ತಿರೂಪ' ದ್ದಾಗಿರುತ್ತವೆ. ಕೇವಲ ಉಪವಾಸವನ್ನು ಮಾತ್ರ ಮಾಡುವ ಸಾಧ್ಯವ್ರತವನ್ನು 'ನಿವೃತ್ತಿರೂಪ'ದ್ದು ಎನ್ನುವರು.

೭. ಏಕಭುಕ್ತವ್ರತ : ಒಂದು ಹೊತ್ತು ಮಾತ್ರ ಊಟ ಮಾಡುವಿಕೆಗೆ ಏಕಭುಕ್ತವ್ರತವೆಂದು ಹೆಸರು. ಇದರಲ್ಲಿ ಸ್ವತಂತ್ರ, ಅನ್ಯಾಂಗ, ಪ್ರತಿನಿಧಿ ಎನ್ನುವ ಮೂರು ವಿಭಾಗಗಳಿವೆ. ಅರ್ಧದಿನ ಕಳೆದ ನಂತರ ಸ್ವತಂತ್ರನು 'ಏಕ ಭುಕ್ತ' ನಾಗುತ್ತಾನೆ. ಮಧ್ಯಾಹ್ನದಲ್ಲಿ 'ಅನ್ಯಾಂಗ'ವನ್ನು ಮಾಡಬಹುದು. 'ಪ್ರತಿನಿಧಿ' ಎನ್ನುವುದನ್ನು ಇವುಗಳ ಹಿಂದಾಗಲಿ, ಮುಂದಾಗಲಿ ಮಾಡಬಹುದು.

'ನಕ್ತವ್ರತ' ರಾತ್ರಿಯಂದು ಮಾಡುವಂತಹ ವಿಧಾನವಾಗಿದೆ. ರಾತ್ರಿಯಾದ ನಂತರ ಗೃಹಸ್ಥನು ಈ ವ್ರತವನ್ನು ಮಾಡುವನು. ಸನ್ಯಾಸಿ ಹಾಗೂ ವಿಧವೆಯರು ಸೂರ್ಯನಿರುವಾಗಲೇ ಈ ವ್ರತವನ್ನು ಮಾಡುವರು.

೮. ಅಯಾಚಿತ ವ್ರತ : ಈ ವ್ರತಕ್ಕಾಗಿ ಏನೂ ಬೇಡಿಕೆ ಇರಬಾರದು. ಏನು ದೊರೆಯುವುದೊ ಅದನ್ನೇ ಸೇವಿಸಬೇಕು. ಹಗಲಾಗಲಿ, ರಾತ್ರಿಯಾಗಲಿ ಯಾವಾಗ ಸಮಯ ಆಗುತ್ತದೆಯೊ, ಕೇವಲ ಒಮ್ಮೆ ಮಾತ್ರ ಫಲಾಹಾರವನ್ನು ಸೇವಿಸಬೇಕು.

೯. ಮಿತಭುಕ್ತ : ಮಿತವಾಗಿ ಆಹಾರ ಸೇವಿಸುವುದು ಎಂದರ್ಥ. ಪ್ರತಿ ದಿನ ಹತ್ತು ಗ್ರಾಸ (ಒಂದು ತುತ್ತು - ಅಥವಾ ಒಂದು ನಿಯತ ಪ್ರಮಾಣದ) ಆಹಾರವನ್ನು ಮಾತ್ರ ಊಟ ಮಾಡಬೇಕು.

ಅಯಾಚಿತ ಹಾಗೂ ಮಿತಭುಕ್ತ - ಇವೆರಡೂ ವ್ರತಗಳು ಪರಮ ಸಿದ್ಧಿಯನ್ನು ನೀಡುವಂತಹವುಗಳಾಗಿವೆ.

೧೦. ಚಂದ್ರಾಯಣ ವ್ರತ : ಚಂದ್ರನನ್ನು ಪ್ರಸನ್ನಗೊಳಿಸುವುದಕ್ಕಾಗಿ, ಚಂದ್ರಲೋಕದ ಪ್ರಾಪ್ತಿಗಾಗಿ ಹಾಗೂ ಪಾಪಗಳ ನಿವೃತ್ತಿಗಾಗಿ ಈ ವ್ರತವನ್ನು ಮಾಡಲಾಗುತ್ತದೆ. ಇದು ಚಂದ್ರಕಲೆಯ ತರಹ ಏರುವುದು ಮತ್ತು ಇಳಿಯುವಿಕೆಯನ್ನು ಹೊಂದಿರುತ್ತದೆ. ಚಂದ್ರನ ಕ್ಷಯಿಸುವಿಕೆ, ವೃದ್ಧಿಯಾಗುವಿಕೆಗೆ ತಕ್ಕಂತೆ ಆಹಾರ ಸೇವನೆಯನ್ನೂ ಮಿತಗೊಳಿಸಬೇಕು. ಇದೇ ಈ ವ್ರತದ ನಿಯಮ.

ಅಮಾವಾಸ್ಯೆ ಹಿಂದಿನ ಶುಕ್ಲ ಪತಿಪದಕ್ಕೆ ೧, ದ್ವಿತೀಯಕ್ಕೆ ೨, ತೃತೀಯಕ್ಕೆ ೩, ಈ ರೀತಿಯಲ್ಲಿ ಹೆಚ್ಚು-ಮಾಡುತ್ತಾ ಪೌರ್ಣಮಿಯಂದು ೧೫ ಗ್ರಾಸಗಳ ಊಟ ಮಾಡಬೇಕು. ಇದರಂತೆ ಪೌರ್ಣಮಿಯ ಹಿಂದಿನ ಕೃಷ್ಣಪ್ರತಿಪದಕ್ಕೆ ೧೪, ದ್ವಿತೀಯಕ್ಕೆ ೧೩, ತೃತೀಯಕ್ಕೆ ೧೨, ಈ ರೀತಿಯಲ್ಲಿ ಕಡಿಮೆ ಮಾಡುತ್ತಾ ಚತುರ್ದಶಿಯಂದು ೧ ಗ್ರಾಸ, ಅಮಾವಾಸ್ಯೆಯಂದು ನಿರಾಹಾರರಾಗಿರಬೇಕು.

ಈ ರೀತಿಯ ಆಹಾರ ಸೇವನೆಯ ರೀತಿಯಲ್ಲಿ ವ್ರತವನ್ನು ಆಚರಿಸುವುದಕ್ಕೆ ಒಂದು ಚಂದ್ರಾಯಣ ಎಂದು ಕರೆಯುತ್ತಾರೆ. ಇದನ್ನು 'ಯವಮಧ್ಯ' ಎಂದೂ ಕರೆಯುತ್ತಾರೆ.

ಇದಕ್ಕೆ ವ್ಯತಿರೇಕವಾದ ರೀತಿಯೂ ಇದೆ. ಆ ಮತ್ತೊಂದು ರೀತಿಯ ಪ್ರಕಾರವು ಈ ರೀತಿ ಇದೆ - ಅಮಾವಾಸ್ಯೆಯ ಹಿಂದಿನ ಶುಕ್ಲ ಪ್ರತಿಪದೆಯಂದು ೧೪, ಬಿದಿಗೆ ೧೩, ತದಿಗೆ ೧೨ ಗ್ರಾಸ - ಈ ರೀತಿಯಲ್ಲಿ ಕಡಿಮೆ ಮಾಡುತ್ತಾ ಪೌರ್ಣಮಿಯಂದು ೧ ಗ್ರಾಸ ಆಹಾರ ಸೇವಿಸಬೇಕು. ಇದೇ ರೀತಿಯಲ್ಲಿ ಪೌರ್ಣಮಿಯ ಹಿಂದಿನ ಕೃಷ್ಣ ಪ್ರತಿಪದದಂದು ೧, ಬಿದಿಗೆಯಂದು ೨, ತದಿಗೆಯಂದು ೩ - ಈ ಕ್ರಮದಲ್ಲಿ ಹೆಚ್ಚು ಮಾಡುತ್ತಾ ಅಮಾವಾಸ್ಯೆಯ ಹಿಂದಿನ ಚತುರ್ದಶಿಯಂದು ೧೪ ಗ್ರಾಸ ಊಟ ಮಾಡಬೇಕು. ಅಮಾವಾಸ್ಯೆಯಂದು ನಿರಾಹಾರಿಗಳಾಗಿರಬೇಕು. ಇದೊಂದು ಚಂದ್ರಾಯಣ. ಇದನ್ನು 'ಪಿಪೀಲಿಕಾ ತನು' ಎಂದು ಕರೆಯಲಾಗುತ್ತದೆ.

೧೧. ಪ್ರಾಜಾಪತ್ಯ ವ್ರತ : ಇದನ್ನು ೧೨ ದಿನಗಳಲ್ಲಿ ಪೂರೈಸಲಾಗುವುದು. ವ್ರತಾರಂಭಕ್ಕೆ ಮೊದಲು ಮೂರು ದಿನಗಳ ಕಾಲ ಪ್ರತಿದಿನ ೨೨ ಗ್ರಾಸ ಊಟವನ್ನು ಮಾಡಬೇಕು. ನಂತರ ಮೂರು ದಿನಗಳವರೆಗೆ ಪ್ರತಿದಿನ ೨೩ ಗ್ರಾಸ ಊಟವನ್ನು ಮಾಡಬೇಕು. ಆ ನಂತರದಲ್ಲಿ ಮೂರುದಿನಗಳು ಪ್ರತಿ ದಿನ

ಪೂರ್ಣ ದೇಯಿಸಿದ ಅನ್ನ ೨೪ ಗ್ರಾಸಗಳಷ್ಟು ಮಾತ್ರ ಊಟ ಮಾಡಬೇಕು. ಆ ನಂತರದ ಮೂರು ದಿನಗಳಂದು ಪೂರ್ತಿ ನಿರಾಹಾರಿಗಳಾಗಿರಬೇಕು. ಈ ರೀತಿ ಹನ್ನೆರಡು ದಿನಗಳವರೆಗೆ ಈ ವ್ರತವನ್ನು ಅನುಸರಿಸಬೇಕು. ಇದನ್ನು ಒಂದು 'ಪ್ರಾಜಾಪತ್ಯ' ಎಂದು ಕರೆಯಲಾಗುತ್ತದೆ.

## ಇತರ ವ್ರತ ಪ್ರಭೇದಗಳು

ಮೇಲೆ ತಿಳಿಸಿದ ವ್ರತಗಳು ತಿಂಗಳು, ಪಕ್ಷ, ತಿಥಿ, ವಾರ, ನಕ್ಷತ್ರ, ಯೋಗ, ಕರಣ, ಸಮಯ ಹಾಗೂ ದೇವ ಪೂಜನಗಳೊಂದಿಗೆ ಸಂಬಂಧವನ್ನು ಹೊಂದಿರುತ್ತವೆ. ಅವುಗಳಿಗೆ ಅನುಗುಣವಾಗಿ ವ್ರತ ಭೇದಗಳನ್ನು ಹೊಂದಲಾಗಿದೆ.

ಅ) ಮಾಸವ್ರತ : ವೈಶಾಖ, ಭಾದ್ರಪದ, ಕಾರ್ತೀಕ, ಮಾಘ - ಹೀಗೆ ಮಾಸಗಳನ್ನು ಅನುಸರಿಸಿ ಮಾಡುವ ವ್ರತಗಳಿಗೆ 'ಮಾಸವ್ರತ'ಗಳೆಂದು ಹೆಸರು.

ಆ) ಪಕ್ಷವ್ರತ : ಶುಕ್ಲ, ಕೃಷ್ಣ ಪಕ್ಷಗಳನ್ನು ಅನುಸರಿಸಿ ಮಾಡುವ ವ್ರತಗಳಿಗೆ 'ಪಕ್ಷವ್ರತ'ವೆಂದು ಹೆಸರು.

ಇ) ಪ್ರತಿಪದ, ಏಕಾದಶಿ, ಅಮಾವಾಸ್ಯೆ ಪೌರ್ಣಮಿ ಇತ್ಯಾದಿಗಳಂದು ನಡೆಸುವ ವ್ರತಗಳನ್ನು 'ತಿಥಿವ್ರತ'ಗಳೆಂದು ಕರೆಯುತ್ತಾರೆ.

ಈ) ವಾರವ್ರತ : ಸೂರ್ಯ, ಸೋಮ, ಭೌಮಾದಿಗಳಂದು ನಡೆಸುವ ವ್ರತಗಳನ್ನು 'ವಾರವ್ರತ'ವೆಂದು ಕರೆಯಲಾಗುತ್ತದೆ.

ಉ) ನಕ್ಷತ್ರ ವ್ರತ : ರೋಹಿಣಿ, ಅನುರಾಧಾ, ಶ್ರವಣ ಇತ್ಯಾದಿ ನಕ್ಷತ್ರವಿರುವ ದಿನಗಳಂದು ನಡೆಸುವ ವ್ರತವನ್ನು 'ನಕ್ಷತ್ರವ್ರತ'ವೆಂದು ಕರೆಯುತ್ತಾರೆ.

ಊ) ಯೋಗವ್ರತ : ವಿಷ್ಕಂಭ ಮೊದಲಾದ ಯೋಗಗಳಿವೆ. ಇವು ೨೭. ವಿಷ್ಕಂಭ, ಪ್ರೀತಿ, ಆಯುಷ್ಮಾನ್, ಸೌಭಾಗ್ಯ, ಶೋಭನ, ಅತಿಗಂಡ, ಸುಕರ್ಮ, ಧೃತಿ, ಶೂಲ, ಗಂಡ, ವೃದ್ಧಿ, ಧ್ರುವ, ವ್ಯಾಘಾತ, ಹರ್ಷಣ, ವಜ್ರ, ಸಿದ್ಧಿ, ವ್ಯತೀಪಾತ, ವರೀಯಾನ್, ಪರಿಘ, ಶಿವ, ಸಿದ್ಧ, ಸಾಧ್ಯ, ಶುಭ, ಶುಕ್ಲ, ಬ್ರಹ್ಮ, ಐಂದ್ರ ಮತ್ತು ವೈಧೃತಿ - ಈ ಯೋಗಗಳ ಅನುಸಾರ ಮಾಡುವ ವ್ರತವನ್ನು 'ಯೋಗವ್ರತ' ಎನ್ನುವರು.

ಎ) ಕರಣ ವ್ರತ : ತಿಥಿಯ ಅರ್ಧ ಭಾಗವನ್ನು ವ್ಯಾಪಿಸಿರುವ ಕಾಲ ವಿಶೇಷವೇ 'ಕರಣ'. ಬವ, ಬಾಲವ, ಕೌಲವ, ತೈತಿಲ, ಗರ, ವಣಿಕ, ಭದ್ರಾ, ಶಕುನಿ, ಚತುಷ್ಪಾದ, ನಾಗವಾನ್, ಕಿಂಸ್ತುಘ್ನಮ್ - ಎನ್ನುವ ಹನ್ನೊಂದು ಕರಣಗಳಿವೆ. ಇವುಗಳಿಗೆ ತಕ್ಕಂತೆ ಅಧಿಷ್ಠಾತೃದೇವತೆಗಳೂ ಇದ್ದಾರೆ. ಈ ದೇವತೆಗಳ ಸಂತೃಪ್ತಿಗಾಗಿ ನಡೆಸುವ ವ್ರತೋಪವಾಸವನ್ನು 'ಕರಣವ್ರತ'ವೆಂದು ಕರೆಯುತ್ತಾರೆ.

ಏ) ದೇವವ್ರತ : ಗಣೇಶ, ವಿಷ್ಣು ಇತ್ಯಾದಿ ದೇವರುಗಳಿಗೆ ಸಂಬಂಧಪಟ್ಟಂತೆ ನಡೆಸುವ ವ್ರತೋಪವಾಸಗಳನ್ನು 'ದೇವವ್ರತ' ಎಂದು ಕರೆಯಲಾಗುತ್ತದೆ.

## ತಿಂಗಳ ವ್ರತಗಳು

ಪ್ರತಿಯೊಂದು ತಿಂಗಳಲ್ಲೂ ಮಾಡಬೇಕಾದ ಕೆಲವು ಪ್ರಮುಖ ವ್ರತಗಳಿವೆ. ಅವುಗಳಲ್ಲಿ ಕೆಲವನ್ನು ಮೇಲೆ ತಿಳಿಸಲಾಗಿದೆ. ಇವುಗಳ ಪೂರ್ಣ ವಿಧಿಗಳ ಬಗ್ಗೆ ತಿಳಿಯಲು ವ್ರತಗ್ರಂಥಗಳು, ಪುರಾಣಗಳು ಇತ್ಯಾದಿಗಳನ್ನು ಪರಾಮರ್ಶಿಸಿ, ಅವುಗಳ ಪೂಜಾ ಪದ್ಧತಿಗಳನ್ನು ತಿಳಿದುಕೊಳ್ಳಬೇಕಾದುದು ಆವಶ್ಯಕ. ಆದರೂ ಇಲ್ಲಿ ಕೆಲವೊಂದು ವ್ರತಗಳ ಹೆಸರುಗಳನ್ನು ನೀಡಲಾಗಿದೆ-

೧. ಚೈತ್ರ : ಸಂವತ್ಸರ ಪ್ರತಿಪದಾವ್ರತ, ಅರುಂಧತೀವ್ರತ, ಸೂರ್ಯ ಷಷ್ಠೀ, ರಾಮನವಮಿ, ಹನುಮಜ್ಜಯಂತೀ, ಅಶೂನ್ಯ ಶಯನವ್ರತ, ಭರ್ತೃದ್ವಾದಶೀ - ಇತ್ಯಾದಿಯವು.

೨. ವೈಶಾಖ : ಅಕ್ಷಯ ತೃತೀಯಾ, ನಿಂಬ ಸಪ್ತಮಿಾ, ಗಂಗಾ ಸಪ್ತಮಿಾ, ಪರಶುರಾಮ ಜಯಂತೀ.

೩. ಜ್ಯೇಷ್ಠ : ವಟಸಾವಿತ್ರೀ, ನಿರ್ಜಲಾ ಏಕಾದಶೀ, ಗಂಗಾದಶಹರಾ.

೪. ಆಷಾಢ : ಹರಿಶಯನೀ ಏಕಾದಶೀ, ಸ್ಕಂದ ಷಷ್ಠೀ, ಸೂರ್ಯ ಸಪ್ತಮಿಾ, ವ್ಯಾಸಪೂರ್ಣಿಮಾ (ಗುರುಪೂರ್ಣಿಮಾ).

೫. ಶ್ರಾವಣ : ನಾಗಪಂಚಮಿಾ, ದೂರ್ವಾಷ್ಟಮಿಾ, ಶ್ರಾವಣ ಪೂರ್ಣಿಮಾ (ಗುರುಪೂರ್ಣಿಮಾ).

೬. ಭಾದ್ರಪದ : ಹರತಾಲಿಕಾ, ಗಣೇಶ ಚತುರ್ಥೀ, ಋಷಿಪಂಚಮಿಾ, ಮುಕ್ತಾಭರಣ ಸಪ್ತಮಿಾ, ಶ್ರೀಕೃಷ್ಣ ಜನ್ಮಾಷ್ಟಮಿಾ, ವಾಮನ ದ್ವಾದಶೀ, ಅನಂತ ಚತುರ್ದಶೀ, ಅಗಸ್ತ್ಯವ್ರತ.

೭. ಆಶ್ವೀಜ : ಉಪಾಂಗಲಲಿತಾ, ಮಹಾಲಯ, ದೇವೀ ನವರಾತ್ರಿ, ವಿಜಯದಶಮಿ, ಶರತ್ ಪೂರ್ಣಿಮಾ.

೮. ಕಾರ್ತೀಕ : ಕರ್ಕ ಚತುರ್ಥೀ, ಧನತ್ರಯೋದಶೀ, ನರಕಚತುರ್ದಶೀ, ದೀಪಾವಳಿ, ಗೋವರ್ಧನ (ಅನ್ನಕೂಟ), ಯಮದ್ವಿತೀಯಾ, ವೈಕುಂಠ ಚತುರ್ದಶೀ, ಭೀಷ್ಮಪಂಚಕ ವ್ರತ, ಹರಿಬೋಧಿನೀ, ಕಾರ್ತೀಕ ಪೂರ್ಣಿಮಾ, ಮನೋರಥ ಪೂರ್ಣಿಮಾ.

೯. ಮಾರ್ಗಶೀರ್ಷ : ಕಾಲಭೈರವಾಷ್ಟಮಿಾ, ದತ್ತ ಜಯಂತೀ.

೧೦. ಪುಷ್ಯ : ಭದ್ರಾಷ್ಟಮಿಾ, ಮಕರ ಸಂಕ್ರಾಂತಿ.

೧೧. ಮಾಘ : ವಸಂತಪಂಚಮಿಾ, ಅಚಲಾ ಸಪ್ತಮಿಾ, ಭೀಷ್ಮಾಷ್ಟಮಿಾ.

೧೨. ಫಾಲ್ಗುಣ : ಮಹಾಶಿವರಾತ್ರಿ, ಹೋಳೀ.

## ವ್ರತಫಲಗಳು

ಈ ಉಪವಾಸ ವ್ರತಗಳನ್ನು ಆಚರಿಸುವಾಗ, ವ್ಯಕ್ತಿಯು ಸಾತ್ವಿಕತೆಯ ಆಶ್ರಯ ಪಡೆಯಬೇಕು. ತನ್ನಲ್ಲಿನ ತ್ರಿವಿಧ ತಾಪಗಳನ್ನು ದೂರ ಮಾಡುವುದಕ್ಕಾಗಿ, ಅಂತಃಕರಣದ ಶುದ್ಧಿಗಾಗಿ, ವಿಶೇಷತಃ ಭಗವತ್ಪ್ರಾಪ್ತಿಗಾಗಿ ಈ ವ್ರತಗಳನ್ನು ಅನುಷ್ಠಾನ ಮಾಡಬೇಕಾಗಿದೆ. ಇದರಿಂದ ವ್ಯಕ್ತಿಗೆ ಕಲ್ಯಾಣ ವಾಗುವುದಲ್ಲದೆ, ಆತ್ಮಶಾಂತಿಯೂ ದೊರೆಯುತ್ತದೆ. ಮನಸ್ಸು, ಹೃದಯಗಳು ನಿರ್ಮಲವಾಗುತ್ತವೆ. ಯೋಚನಾ ವಿಚಾರಗಳಲ್ಲಿ ಸತ್ವಗುಣವು ಉದಯಿಸುತ್ತದೆ. ವಿವೇಚನಾ ಶಕ್ತಿಯು ಕಂಡು ಬಂದು, ಆ ವ್ಯಕ್ತಿಯು ವಿವೇಕಯುಕ್ತನಾಗುತ್ತಾನೆ. ಅವನಲ್ಲಿ ಸತ್ಯ, ಅಸತ್ಯಗಳ ನಿರ್ಣಯ ಮಾಡುವ ಶಕ್ತಿ ಹುಟ್ಟುತ್ತದೆ.

ಇವೆಲ್ಲವುಗಳ ಪರಿಣಾಮವಾಗಿ ಅವನು ಸನ್ಮಾರ್ಗದತ್ತ ಮುನ್ನಡೆಯುವನು. ಲೌಕಿಕ ಹಾಗೂ ಪರಲೋಕಗಳ ಸುಖವೂ ಇದರಿಂದ ಪ್ರಾಪ್ತವಾಗುತ್ತದೆ.

ಇವೆಲ್ಲವೂ ವ್ರತೋಪವಾಸದ ಮಹಿಮೆಯಾಗಿರುತ್ತದೆ.

ಇಷ್ಟೇ ಅಲ್ಲದೆ, ಈ ವ್ರತವನ್ನು ಅನುಷ್ಠಾನ ಮಾಡುವುದರಿಂದ ಮಾಡಿದ ಪಾಪಗಳ ನಿವಾರಣೆಯಾಗುತ್ತದೆ. ಹೀಗೆ ವ್ರತ ಮಾಡುವವನ ಮೇಲೆ ದೇವತೆಗಳು ಪ್ರಸನ್ನರಾಗುವರು. ಅವರ ಮನೋಭೀಷ್ಟಗಳು ಅವರಿಗೆ ಲಭಿಸುವವು. ನಿರ್ದಿಷ್ಟ ವಿಧಿಗಳ ಮುಖಾಂತರ ಈ ವ್ರತಗಳನ್ನು ಅನುಷ್ಠಾನ ಮಾಡಿದಲ್ಲಿ ಪ್ರಾಪಂಚಿಕ ದುಃಖಗಳಿಂದ ಮುಕ್ತನಾಗಿ ಸ್ವರ್ಗಲೋಕ ಪ್ರಾಪ್ತಿಯನ್ನು ಪಡೆದು, ಅವರಿಂದ ಸಮ್ಮಾನಿತನಾಗುತ್ತಾನೆ.

(ಆಧಾರಗಳಿಂದ)




ಕಂಚಿ ಪರಮಾಚಾರ್ಯಸ್ವಾಮಿ

# ನವಜೀವನ ಅಂಧರ ಸಹಾಯ ಕೇಂದ್ರ (ನೋಂ)

## (ವೃದ್ಧರ, ಅಂಧರ ಉಚಿತ ಆವಾಸ ಕೇಂದ್ರ)

## 2-21 ಅ. ಸಪ್ತಗಿರಿ ಆಶ್ರಮ

## ತಿರುಚಾನೂರು - ತಿರುಪತಿ - 517 503.

# ಮ ನ ವಿ

ಕಂಚಿಕಾಮಕೋಟಿ ಪೀಠದ ಶ್ರೀ ಶಂಕರಾಚಾರ್ಯರ ವಿಶೇಷ ಅನುಗ್ರಹದಿಂದ ಕಳೆದ 16 ವರ್ಷದಿಂದ ನವಜೀವನ ಆಶ್ರಮ ನೇತ್ರಹೀನರಿಗೆ ವೃದ್ಧರಿಗೆ ಅನೇಕ ಸಹಾಯ ಕಾರ್ಯಗಳನ್ನು ನಿರ್ವಹಿಸುತ್ತಿದೆ.

**ದಾನಗಳಲ್ಲಿ ಶ್ರೇಷ್ಠದಾನ ಅನ್ನದಾನ :** ಎಲ್ಲ ದಾನಗಳಲ್ಲೂ ಅನ್ನದಾನ ಶ್ರೇಷ್ಠವೆಂದು ಪುರಾಣಗಳಲ್ಲಿ ಹೇಳಲ್ಪಟ್ಟಿವೆ. ಅದರಲ್ಲೂ ತಿರುಪತಿ, ರಾಮೇಶ್ವರ ಕಾಶಿ ಮೊದಲಾದ ಪುಣ್ಯಸ್ಥಳಗಳಲ್ಲಿ ಮಾಡುವ ಅನ್ನದಾನದಿಂದ ದಾತರಿಗೆ ದೊಡ್ಡ ಪುಣ್ಯಫಲ ಲಭಿಸುತ್ತದೆ.

**ನಾರಾಯಣಸೇವೆ :** ತಿರುಪತಿಯ ನವಜೀವನ ಆಶ್ರಮದಲ್ಲಿ ನಾರಾಯಣ ಸೇವೆಯಾಗಿ ನಿತ್ಯವೂ ಮೂರುಹೊತ್ತು ದಾತರ ನೆರವಿನಿಂದ ನೇತ್ರಹೀನರಿಗೆ, ವೃದ್ಧರಿಗೆ, ಅನಾಥರಿಗೆ ಅನ್ನದಾನ ನಡೆಯುತ್ತಿದೆ. ಒಂದು ದಿನದ ಅನ್ನದಾನಕ್ಕೆ ಸುಮಾರು ರೂ. 500/- ವೆಚ್ಚವಾಗುತ್ತಿದೆ. ದಯೆಯುಳ್ಳ ದಾನಿಗಳು ತಮ್ಮ ಹುಟ್ಟಿದ ದಿನ, ವಿವಾಹದ ದಿನ, ಮಕ್ಕಳ ಜನ್ಮದಿನ, ಅಥವಾ ಕೀರ್ತಿಶೇಷರಾದವರ ಪುಣ್ಯತಿಥಿಯಯಂದು ಒಂದು ದಿನದ ಅನ್ನದಾನಕ್ಕೆ ರೂ. 500/- ವಂತಿಗೆಯನ್ನು ನೀಡಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರ ಆಶೀರ್ವಾದ ಹೊಂದಬೇಕೆಂದು ಕೋರುತ್ತೇವೆ.

ಅನ್ನದಾನ ಮಾಡುವ ದಾತರ ಗೋತ್ರನಾಮಗಳೊಡನೆ ಶ್ರೀ ವೆಂಕಟೇಶ್ವರಸ್ವಾಮಿ, ಅಲಮೇಲು ಮಂಗಮ್ಮವರಲ್ಲಿ ಪ್ರಾರ್ಥನೆ ಸಲ್ಲಿಸಿ ಪ್ರಸಾದವನ್ನು ಪೋಸ್ಟ್ ಮೂಲಕ ಕಳುಹಿಸಲಾಗುವುದು. ದಾತರು ತಮ್ಮ ವಂತಿಗೆಗಳನ್ನು ಚೆಕ್, ಡಿ.ಡಿ., ಎಂ.ಓ. ಗಳ ಮೂಲಕ ನವಜೀವನ ಬ್ಲೈಂಡ್ ರಿಲೀಫ್‌ಸೆಂಟರ್ ತಿರುಪತಿ - ಇವರ ಹೆಸರಿಗೆ ಕಳುಹಿಸಬೇಕೆಂದು ಕೋರುತ್ತೇವೆ.

**|| ಶ್ರೇಯೋ ಭೂಯಾತ್ ಸಕಲ ಜನಾನಾಮ್ ||**

ಫೋನ್ - 25992,
ನವಜೀವನ ಅಂಧರ ಸಹಾಯಕೇಂದ್ರ,
ಸಪ್ತಗಿರಿ ಆಶ್ರಮ - ತಿರುಚಾನೂರು,
ತಿರುಪತಿ - 517 503

ಮಾನವ - ಮಾಧವ ಸೇವೆಯಲ್ಲಿ
**ಸ್ವಾಮಿ ಶ್ರೀಧರ ಆಚಾರ್ಯ**
ಸಂಸ್ಥಾಪಕರು / ಅಧ್ಯಕ್ಷರು.

# ಶ್ರೀನಿವಾಸ ಕಲ್ಯಾಣ

ತೆಲುಗು ಮೂಲ : ಕೆ. ಸುಬ್ಬರಾವ್. ಕನ್ನಡಾನುವಾದ : ಎಸ್. ವಿ. ಹೇಮಾವತಿ.

ಹಿಂದಿನ ಸಂಚಿಕೆಯಿಂದ

## ಎರಡನೆ ರಂಗ

(ಭೃಗುವು ನಡೆಯುತ್ತಿದ್ದಾನೆ ನೇಪಥ್ಯದಲ್ಲಿ ಧ್ವನಿ)

ಕದಲಿದ ಭೃಗುವು ಕಲಹವ ತೀರಿಸೆ
ಯಜ್ಞೇಶನಾರೊ ಇತರರಿಗರುಹೆ
ಬೇಗನೆ ಸೇರಲು ಸತ್ಯಾಲಯವ
ಸತ್ಯಾಲಯ ಸತ್ಯಾಲಯ ಸತ್ಯಾಲಯ
ಸಂಗೀತ ಸಾಹಿತ್ಯ ಸೌರಭ್ಯ ನಿಲಯ
ಸಾಮಾದಿ ವೇದಗಳ ನಾದಾಲಯ
ಸಂತತ ಹರಿನಾಮ ಪೂರ್ಣಾಲಯ
ಪರಮೇಷ್ಠಿ ಸಂವಾಸ ಸತ್ಯಾಲಯ

(ಭೃಗುವು ನಿಷ್ಕ್ರಮಿಸುತ್ತಾನೆ. ನಾರದ ಪ್ರವೇಶಿಸುತ್ತಾನೆ ಹಾಡುತ್ತ)

ಭಾವದ ಒಳಗೂ ಬಾಹ್ಯದಲೂ ಸಹ
ಗೋವಿಂದ ಗೋವಿಂದ
ಎನ್ನುತ ಪಾಡೊ ಮನವೇ
ಹರಿಯವತಾರಗಳೆ ಅಖಿಲ ದೈವತವು
ಹರಿಯೊಳಗಿನವೇ ಬ್ರಹ್ಮಾಂಡಂಗಳು
ಹರಿನಾಮಂಗಳೇ ಸರ್ವಮಂತ್ರಂಗಳು
ಹರಿ ಹರಿ ಹರಿ ಹರಿ
ಎನ್ನು ನೀ ಮನವೇ || ಭಾವ ||

(ತೆರೆ ಸರಿದು ಹಿಂದೆ ಸತ್ಯ ಲೋಕ ಕಾಣುತ್ತದೆ. ಭೃಗು ಅದನ್ನು ಪ್ರವೇಶಿಸಿದ್ದಾನೆ. ನಾರದ ಕ್ರಮೇಣ ರಂಗದಿಂದ ನಿಷ್ಕ್ರಮಿಸುತ್ತಾನೆ.)

ಭೃಗು : ಅಹ! ಇದು ಸತ್ಯಲೋಕವೇ! ಅಖಿಲಾಂಡ ಕೋಟಿ ಬ್ರಹ್ಮಾಂಡನಾಯಕನಾದ ಆದಿ ನಾರಾಯಣನ ನಾಭಿಕಮಲದಲ್ಲಿ ಜನಿಸಿ, ಅನಿತರ ಸಾಧ್ಯವಾದ ಸರ್ವವೇದಪಾರಂಗತನಾಗಿ ನಿತ್ಯ ಪ್ರಣವ ವೀಣಾನಾದನೈಕ ಲೋಲುಪಳಾದ ವಾಗ್ದೇವಿಯೊಡನೆ ವಿರಿಂಚಿ ವಾಸಿಸುವ ಈ ಸತ್ಯಾಲಯದ ಸೌಭಾಗ್ಯವನ್ನು ಏನೆಂದು ಕೊಂಡಾಡಬೇಕು! ಒಂದೆಡೆ ವೇದಗಾನ ಇನ್ನೊಂದೆಡೆ ಸ್ತೋತ್ರಪಾಠ ಮತ್ತೊಂದೆಡೆ ಅಪೂರ್ವಗಾನ ಕಳಾ ವೈದುಷ್ಯ ಪ್ರದರ್ಶನ! ಇಷ್ಟರ ನಡುವೆ ಪರಮೇಷ್ಠಿಯ ಸೃಷ್ಟಿ ವಿನ್ಯಾಸವು ನಿಜವಾಗಿ ನೋಡಿ ಧನ್ಯರಾಗಬೇಕಾದ ವಿಶೇಷವೇ. ಆದರೆ ಅಷ್ಟು ಪರವಶನಾಗಿರುವ ದಂಪತಿಗಳ ಎದುರಿಗೆ ಹೆಜ್ಜೆ ಹಾಕುವುದೇ. ನಿಂತು ಬಿಡುವುದೇ! ಆಗಲಿ ಕಾರ್ಯಾರ್ಥಿಗಳಿಗೆ ಕಾಲಯಾಪನೆ ಯೇಕೆ? (ಮತ್ತೂ ಮುಂದೆ ಬಂದು).

ಸುಧಾಸಾರ ರೂಪಂ ಸದಾ ನಿರ್ವಿಕಾರಂ
ಹೃದಂತಸ್ಥಂ ಶೌರಿಂ ಚಿದಾನಂದ ದೀಪ್ತಿಂ
ವಿಧೂತಾಖಿಲಾಘಂ ಸದಾವೇದ ಲೋಲಂ
ವಿಧಾತಾರ ಮೀಡೇ ವರೇಣ್ಯಂ ವಿರಿಂಚಿಂ



(ಹಿನ್ನೆಲೆಯಲ್ಲಿ ವೀಣಾನಾದ, ಮಂತ್ರಪುಷ್ಪ ಪಠಣ ಕೇಳಿ ಬರುತ್ತದೆ.)

ಭೃಗು : ಪರಮೇಷ್ಠಿ ವೇದನಾದದಲ್ಲಿ ಮುಳುಗಿ ನನ್ನ ಆಗಮನವನ್ನೇ ಗಮನಿಸಿದಂತಿಲ್ಲ. ಮತ್ತೆ ಮಾತನಾಡುವೆ.

ಬ್ರಹ್ಮನ್ :

ಸುರಾಪಗಾ ವಿಗಾಹಮಾನ ಶ್ವೇತವಾಹನಂ
ಸುರಾಸುರ ಪ್ರಭಾ ಸಮಾರ್ಚಿತಾಂಘ್ರಿ ಪದ್ಮಕಂ
ನಿರಂತರಾದಿ ನಾದವಾದಿನೀ ವಧೂ ಮುಖಂ
ಸ್ಮರಾಮ್ಯಹಂ ಚತುರ್ಮುಖಂ
ಚತುರ್ವಿಧಂ ಸದಾ

(ಹಿನ್ನೆಲೆಯಲ್ಲಿ ವೀಣಾವಾದನ ಮಂತ್ರಪುಷ್ಪಪಠಣ ಮುಂದುವರೆಯುವುದು.)

ಭೃಗು : (ಉದ್ವಿಗ್ನನಾಗಿ) ಛಿ! ಏನೀ ಅವಮಾನ! ಎಂತಹ ದೇವತಾ ವೃದ್ಧನಾದರೂ ಬಂದ ಅತಿಥಿಯನ್ನು ಗಮನಿಸದಂತಹ ಅನ್ಯಮನಸ್ಕತೆಯೇ? ಸಾಕ್ಷಾತ್ ವಿಷ್ಣುವಿನ ಅಂಶಸಂಭವನಾದ ನನ್ನನ್ನು...... ಸೋದರ ಧರ್ಮದಿಂದ ಆದರಿಸುವುದನ್ನು ಬಿಟ್ಟು ನಿರಾದರಿಸಿದ ಈತನಿಗೆ ಪಾಠವನ್ನು ಕಲಿಸಬೇಕಾದ್ದೇ (ಇಲ್ಲದಿರುವ ಬ್ರಹ್ಮನತ್ತ ತಿರುಗಿ) ಚತುರ್ಮುಖಾ! ದೇವತಾ ವೃದ್ಧನೆಂದು ಅಭಿಮಾನದಿಂದ ದರ್ಶಿಸ ಬಂದ ನನ್ನನ್ನು ವೇದ ಜಡನಾಗಿ ತೃಣೀಕರಿಸಿದೆ. ನಾಲ್ಕು ಮುಖಗಳಿದ್ದೂ ಗಮನಿಸದ ನಿನ್ನನ್ನು ನರಲೋಕದಲ್ಲಿ ಯಾರೂ ಗಮನಿಸದೆಯೇ ಹೋಗಲಿ. ನಿನಗೆ ಪೂಜೆಯಿಲ್ಲದಿರಲಿ (ಹೊರಟು ಹೋಗುವನು) (ಹಿನ್ನೆಲೆಯಲ್ಲಿ ಸರಸ್ವತೀ ಬ್ರಹ್ಮಸಂವಾದ ಕೇಳಿಬರುತ್ತದೆ.)

ಸರಸ್ವತಿ : (ಧ್ವನಿ) ಸ್ವಾಮಿ ಅಂತಹ ಬ್ರಹ್ಮಜ್ಞಾನಿಗೆ ಇಷ್ಟು ತಾಮಸವೇ? ಸರ್ವಜಗತ್ ಕರ್ತರಾದ ತಮ್ಮನ್ನೇ ಶಪಿಸಿದನಲ್ಲ! ಇದೇನು ವಿಪರೀತ?

ಬ್ರಹ್ಮ: ವಾಗ್ದೇವಿ! ಇದು ಕಾಲ ಪ್ರಭಾವ ಆದ್ದರಿಂದ ಅವಶ್ಯಮನುಭೋಕ್ತವ್ಯಂ.

## ಮೂರನೆಯ ರಂಗ

(ಭೃಗುವು ನಡೆದಿರುವಂತೆ ಹಿನ್ನೆಲೆಯ ಗಾನ)

ಕದಲಿದ ಕನಲಿದ ಮುನಿ ಕಾಣೆ ರಜತಾಲಯ
ರಜತಾಲಯ ರಜತಾಲಯ ರಜತಾಲಯ
ಓಂಕಾರ ಹ್ರೀಂಕಾರ ಸಮಭಾವಿತಂ
ನಟರಾಜ ರಸರಾಜ ಕ್ರೀಡಾಲಯಂ
ಗಿರಿಕನ್ಯಕಾ ಪ್ರಣಯ ಪೂರ್ಣಾಲಯಂ
ರಸಭಾವ ಶೃಂಗಾರ ದೇವಾಲಯಂ

(ಭೃಗುವು ನಿಷ್ಕ್ರಮಿಸುತ್ತಾನೆ. ಹಿಂದೆಯೇ ಹಾಡುತ್ತ ನಾರದ ಪ್ರವೇಶ)

ಭಾವದ ಒಳಗೆ ಬಾಹ್ಯದಲೂ ಸಹ
ಗೋವಿಂದ ಗೋವಿಂದ
ಎನ್ನುತ ಪಾಡೊ ಮನವೇ
ವಿಷ್ಣು ಮಹಿಮೆಗಳೆ ವಿಹಿತ ಕರ್ಮಗಳು
ವಿಷ್ಣುವನೆ ಹೊಗಳುವ ವೇದಗಳು
ವಿಷ್ಣುವೊಬ್ಬನೆ ವಿಶ್ರಾಂತರಾತ್ಮನು
ವಿಷ್ಣು ವಿಷ್ಣುವೆಂದು ಹುಡುಕೆಲೊ ಮನವೇ

(ನಾರದ ನಿಷ್ಕ್ರಮಿಸುತ್ತಿರುವಂತೆ ಹಿನ್ನೆಲೆಯ ತೆರೆ ಸರಿದು ಕೈಲಾಸ ಗಿರಿಶಿಖರಗಳ ಮಧ್ಯೆ ಪಾರ್ವತಿ ಪರಮೇಶ್ವರರ ಆನಂದ ತಾಂಡವದ ನೆರಳು ಕಾಣುತ್ತದೆ. ಭೃಗು ಪ್ರವೇಶಿಸುತ್ತಾನೆ)

ಭೃಗು : (ಒಳಕ್ಕೆ ಬರುತ್ತ) ಸತ್ಯಲೋಕದಲ್ಲೊಂದು ಸಮಸ್ಯೆ ತೀರಿತು. ಇನ್ನು ಇಲ್ಲಿನ ಚಿತ್ರವನ್ನು ನೋಡಬೇಕು. ಆತ ಪ್ರಣವನಾದ ಲೋಲನಾದರೆ ಈತ ಪ್ರಣಯ ನಾಟ್ಯಲೋಲ. ಸಮಕ್ಷಮ ಸೇರುವಾಗ ಹೇಗಿರುವುದೋ ಏನೋ ಪರಿಸ್ಥಿತಿ. ಆಗಲಿ ತಿನ್ನುವ ಮೊದಲು ರುಚಿಯ ಮಿಮಾಂಸೆ ಯೇಕೆ?

(ಪೂರ್ತಿಯಾಗಿ ರಂಗದ ಒಳಕ್ಕೆ ಬರುತ್ತಾನೆ)

ಆಹ! ಪರಮಶಿವನು ಸರ್ವಜ್ಞ ಜಿತೇಂದ್ರಿಯ ಆದರೂ ಪ್ರದೋಷ ಸಮಯದಲ್ಲಿ ಪ್ರಣಯಲೋಲನಾಗಿದ್ದಾನಲ್ಲ. ಸನ್ನಿಧಿಯಲ್ಲಿ ಸಮಯ ಹೇಗಿರುವುದೊ ಏನೊ! ಪರೀಕ್ಷಿಸ ಬಂದ ನನಗೆ ಹಲವು ಯೋಚನೆಗಳೇಕೆ? ಮಾತನಾಡಿಸುವೆ.

ಪರಮೇಶ್ವರಾ!

ಜಯತ್ವದಭ್ರ ವಿಭ್ರಮ ಭ್ರಮದ್ಭುಜಂಗ ಮಶ್ವಶ
ದ್ವಿನಿರ್ಗಮತ್ತ್ರಮ ಸ್ಫುರತ್ಕರಾಳ
ಫಾಲ ಹವ್ಯರಾಟ್
ದಿಮಿದ್ಧಿಮಿ ಧ್ಧಿಮಿ ಧ್ಧಿಮಿ ಧ್ವನನ್ ಮೃದಂಗ ತುಂಗ ಮಂಗಳ
ಧ್ವನಿಕ್ರಮ ಪ್ರವರ್ತಿತ ಪ್ರಚಂಡ ತಾಂಡವಃ ಶಿವಃ

(ನಾಟ್ಯ ಮುಂದುವರೆಯುತ್ತದೆ)

ಭೃಗು : ಎಂತಹ ನಾಟ್ಯಲೋಲನಾದರೂ - ಇಂತಹ ನಿರಾದರಣೆಯೇ! ಊಂ ಮತ್ತೊಮ್ಮೆ ಪ್ರಯತ್ನಿಸುವೆ.

ಅಭವಾ !

ಅಖರ್ವ ಸರ್ವಮಂಗಳಾ
ಕಳಾಕದಂಬ ಮಂಜರೀ
ರಸ ಪ್ರವಾಹ ಮಾಧುರೀ
ವಿಜೃಂಭಣಾ ಮಧುವ್ರತಂ
ಸ್ಮರಾಂತಕಂ ಪುರಾಂತಕಂ
ಭವಾಂತಕಂ ಮಖಾಂತಕಂ
ಗಜಾಂತಕಾಂಧಕಾಂತಕಂ
ತಮಂತ ಕಾಂತಕಂ ಭಜೇ

(ನಾಟ್ಯ ಮುಂದುವರೆಯುತ್ತದೆ.)

ಭೃಗು : ಊರಲ್ಲಿರಲು ಅರ್ಹನಲ್ಲದ ಸ್ಮಶಾನವಾಸಿಗೆ ಬೆಳ್ಳಿಯ ಬೆಟ್ಟದ ಮೇಲೆ ಮನೆ ಸಿಕ್ಕಿದರೆ, ಅಲ್ಪನಿಗೆ ಅರ್ಧರಾತ್ರಿಯ ಐಶ್ವರ್ಯವಾಯಿತು. ಅದರ ಮೇಲೆ ಸರ್ವಜ್ಞನೆಂಬ ಅಹಂಕಾರ ಬೇರೆ. ಈತ ಪೂಜೆಗೆ ಅರ್ಹನಲ್ಲ.

(ಶಿವನತ್ತ ತಿರುಗಿ)

ಲಿಂಗಾ! ಸರ್ವಜ್ಞನೆಂದೂ, ಜಿತೇಂದ್ರಿಯನೆಂದೂ, ಸರ್ವಭೂತನಾಥನೆಂದೂ ಸೇವಿಸ ಬಂದ ನನ್ನನ್ನು ಪ್ರಣಯಿನೀ ಪರಿರಂಭನ ಕ್ರಿಯಾಶೀಲನಾಗಿ ತಿರಸ್ಕರಿಸಿದೆ. ಲೋಲನಾದ ನಿನಗೆ ಲಿಂಗಪೂಜೆಯ ಹೊರತು ಬೇರೆ ಪೂಜೆಯೇ ದೊರಕದಿರಲಿ. (ತೆರೆಯಲ್ಲಿ ಶಿವಪಾರ್ವತಿಯರ ಧ್ವನಿಕೇಳಿ ಬರುತ್ತದೆ.)

ಶಿವ : (ಕೋಪದಿಂದ) ಅಪ್ರತಿಷ್ಠನೇ! ಏನೆಂದೆ (ಶೂಲ ಪ್ರಯೋಗಿಸಲು ಹೊರಡುವನು, ಪಾರ್ವತಿ ತಡೆಯುತ್ತಾಳೆ)

ಪಾರ್ವತಿ : ಕ್ಷಮೆಯಿರಲಿ ಸ್ವಾಮಿ. ಆತ ವಿಷ್ಣು ಅಂಶಜ.

ಶಿವ : ಎಂತಲೇ ಬದುಕಿದ. ಮೂರ್ಖ.

(ಭೃಗು ನಿಷ್ಕ್ರಮಿಸುತ್ತಾನೆ.)

## ನಾಲ್ಕನೆಯ ರಂಗ

(ಭೃಗುವು ಮುಂದೆ ನಡೆದು ಹೋಗುತ್ತಾನೆ. ಹಿಂದೆಯೇ ನಾರದ ಹಾಡುತ್ತ ಬರುತ್ತಾನೆ.)

ಭಾವದ ಒಳಗೆ ಬಾಹ್ಯದಲೂ ಸಹ
ಗೋವಿಂದ ಗೋವಿಂದ ಎಂದು ನೆನೆ ಮನವೇ

ಅಚ್ಯುತ ನೀತನೆ ಆದಿಯು ಅಂತ್ಯವು
ಅಚ್ಯುತನೆ ಅಸುರಾಂತಕನು
ಅಚ್ಯುತನು ಶ್ರೀ ಪದ್ಮನಾಭ ನೀತನೆ
ಅಚ್ಯುತ ಅಚ್ಯುತ ಶರಣೆನ್ನು ಮನವೇ || ಭಾವ ||

(ಹಿನ್ನೆಲೆಯ ತೆರೆ ಸರಿದು ಹಾಲಿನ ಸಮುದ್ರದಲ್ಲಿ ಶೇಷಶಾಯಿ ವಿಷ್ಣು ಕಾಣಿಸುತ್ತಾನೆ. ಮಹಾಲಕ್ಷ್ಮಿ

ಆತನ ಪಾದಗಳನ್ನು ಒತ್ತುತ್ತಿದ್ದಾಳೆ. ನೇಪಥ್ಯದಲ್ಲಿ 'ಶಾಂತಾಕಾರಂ ಭುಜಗಶಯನಂ' ಕೇಳಿಬರುತ್ತದೆ.)

ಲಕ್ಷ್ಮಿ: ಪ್ರಾಣೇಶ್ವರಾ! ಪ್ರಾಣೇಶ್ವರಾ! ಜಗತ್ಪ್ರಭುವು ಇಂದೇಕೊ ಪರವಶರಾಗಿದ್ದಾರೆ. ಶ್ರೀನಾಥಾ!

ವಿಷ್ಣು : ಏನೆಂದೆ! ಹೌದು ದೇವಿ! ಇಂದೇಕೋ ಮನ ಸ್ವಾಧೀನವಿಲ್ಲದಾಗಿದೆ.

ಲಕ್ಷ್ಮಿ: ಏನು ಸ್ವಾಮಿ! ಮತ್ತೆ ಯಾವ ಗಜೇಂದ್ರ ನಾದರೂ ಮೊರೆಯಿಟ್ಟನೇ! ಮೊದಲೇ ಹೇಳಿಬಿಡಿ. ತಕ್ಕ ಜಾಗ್ರತೆಯಲ್ಲಿರುವೆ.

ವಿಷ್ಣು : (ಕಿರುನಗೆಯಿಂದ) ಏನು ದೇವಿ! ನಿನಗಿನ್ನೂ ನೆನಪಿದೆಯೇ.

ಲಕ್ಷ್ಮಿ: ಹೇಗೆ ಮರೆಯಲಿ ಸ್ವಾಮಿ! ಕೋಪದಿಂದ ನಾನು ಆಚೆಗೆ ಹೊರಟಿರಲು ತಾವು ಹಿಡಿದ ಉತ್ತರೀಯ ದೊಡನೆಯೇ ಹೊರಟು, ತಮ್ಮ ಹಿಂದೆಯೇ ಬರಬೇಕಾಯಿತು. ಆ ಹಾಸ್ಯಾಸ್ಪದ ಸನ್ನಿವೇಶವನ್ನು ಹೇಗೆ ಮರೆಯಲಿ.

ವಿಷ್ಣು : ನಿತ್ಯಾನಪಾಯನಿಯಾದ ನಿನ್ನನ್ನು ಬಿಟ್ಟು ನಾನಿರಬಹುದಾದ ಸ್ಥಳವಾವುದರೂಯಾವುದು. ಎಂತಲೇ ನಿನ್ನನ್ನು ನನ್ನ ಹೃದಯ ಭದ್ರ ಪೀಠದಲ್ಲಿ ಇಟ್ಟುಕೊಂಡೆನಲ್ಲ.

(ಈರ್ವರೂ ಪರಿಹಾಸದಿಂದ ನಗುತ್ತಿರುತ್ತಾರೆ. ಭೃಗು ಒಳಗೆ ಬರಲು ಹೆಜ್ಜೆಯಿಟ್ಟು ಹಿಂದಕ್ಕೆ ನಡೆಯುತ್ತ)

ಭೃಗು : (ಸ್ವಗತ) ಆಹಾ! ಲೋಕವೆಲ್ಲ ತಮೋಮಯವಾಗಿದೆಯಲ್ಲ. ಮೂರು ಹೊತ್ತು ಸರಸವಾಡುವುದೇ ಮೂವರು ಮೂರ್ತಿಗಳಿಗೆ ಕೆಲಸವಾದಂತಿದೆ.

ಲಕ್ಷ್ಮಿ: ಈ ಮಾತುಗಳಿಗೇನು ಸ್ವಾಮಿ! ಮತ್ತೆ ಯಾವುದಾದರೂ ಅವತಾರವೆತ್ತಬೇಕಾಗಿ ಬಂದರೆ ನನ್ನನ್ನು ದೂರಮಾಡಿ ಯಾವಳನ್ನೊ ಕಟ್ಟಿಕೊಳ್ಳುವಿರಿ. ನಿಮ್ಮ ಸಂಗತಿ ನನಗೆ ತಿಳಿಯದ್ದೇನಲ್ಲ.

ವಿಷ್ಣು : ದೇವಿ! ನಾನೆಂತಹ ಶ್ರೀಮಂತನಾದರೂ ಒಮ್ಮೊಮ್ಮೆ ಭಕ್ತ ಪರತಂತ್ರನಾಗಿ ನನ್ನ ಮಾಯೆಗೆ ನಾನೇ ಒಳಗಾಗುವುದು ತಪ್ಪುವುದಿಲ್ಲ. ಅಂತಹ ಪರಿಸ್ಥಿತಿಗಳಲ್ಲಿ ನಿನ್ನನ್ನು ನಾನೋ ನನ್ನನ್ನು ನೀನೋ ಹಿಂಬಾಲಿಸುವುದು ತಪ್ಪುವುದಿಲ್ಲ.

ಭೃಗು : (ಸ್ವಗತ) ಏನು ಈತನ ನಿರ್ಲಕ್ಷ್ಯ, ಮೇರೆಯಿಲ್ಲದ್ದಾಗಿದೆಯಲ್ಲ. ಸರ್ವಜಗನ್ನಾಥನೆಂದೂ ಸರ್ವಶಕ್ತಿ ಸಮನ್ವಿತನೆಂದೂ ಗರ್ವವಿರಬಹುದು. (ವಿಷ್ಣುವನ್ನು ಉದ್ದೇಶಿಸಿ) ಶ್ರೀಮನ್ನಾರಾಯಣಾ! (ವಿಷ್ಣುವು ಶ್ರೀಯನ್ನು ಹತ್ತಿರಕ್ಕೆ ಸೆಳೆಯುತ್ತಾನೆ.)

ಭೃಗು : ಛೀ ಪಾಪಿ! ಅತಿಥಿ ಎದುರಿಗಿದ್ದರೂ ಕಣ್ಣುಕಾಣದ, ನಿತ್ಯ ಶ್ರೀರಾಗಕಲುಷಿತ ವಕ್ಷನಾದ ನಿನ್ನನ್ನು ಶಿಕ್ಷಿಸಬೇಕಾದ್ದೇ

(ಮುಂದೆ ಬಂದು ಬಿಡೀರನೆ ವಿಷ್ಣುವಿನ ವಕ್ಷಸ್ಥಳವನ್ನೊದೆಯುತ್ತಾನೆ)

ಲಕ್ಷ್ಮಿ: (ದಿಗ್ಗನೆ ಎದ್ದು ನಿಂತು) ಋಷಿ ಪಾಂಸವಾ! ಎಂತಹ ಕೆಲಸ ಗೈದೆ!

ಅನ್ಯೋನ್ಯವಾಗಿರುವ ದಂಪತಿಗಳ ಎದುರಿಗೆ ಬರಬಾರದೆನ್ನುವ ಸಾಮಾನ್ಯ ಸಭ್ಯತೆಯನ್ನೂ ಲೆಕ್ಕಿಸದೆ ನಿತ್ಯ ಶ್ರೀಕರವಾದ ನನ್ನ ನಾಥನ ವಕ್ಷಸ್ಥಳವನ್ನು ಸರ್ವದೇವತಾ ನಿಂದ್ಯವಾದ ನಿನ್ನ ಪಾದಸ್ಪರ್ಶದಿಂದ ಅಪವಿತ್ರಗೊಳಿಸಿದೆ.

ವಿಷ್ಣು : ದೇವಿ; ಸ್ಮರಣೆಯಿರಲಿ. ಬಂದವರಾರೊ ತಿಳಿದುಕೊಂಡು ಮಾತನಾಡಬೇಕಲ್ಲ. ಈತ ನಮಗೆ ಪುತ್ರ ಸಮಾನ. ಮಕ್ಕಳ ದೋಷವನ್ನು ತಾಯ್ತಂದೆಯರು ಸಹಿಸಬೇಕಲ್ಲವೇ!

ಲಕ್ಷ್ಮಿ : ಸ್ವಾಮಿ! ನೀವಾಡುವ ಮಾತು ಕೊಡ ಗೂಸುಗಳಿಗಲ್ಲದೆ ಗಡ್ಡ ಬೆಳೆದವರಿಗಲ್ಲ. ಕಣ್ಣು ಕಾಣದ ಅಹಂಕಾರದಿಂದ ಸರ್ವದೇವತಾಸ್ವರೂಪರಾದ ನಿಮ್ಮನ್ನು ಅವಮಾನಿಸಿದ ಈ ಧರ್ಮ ಭ್ರಷ್ಟವನ್ನು ತಾವು ಹಿಂದಿಕ್ಕಿಕೊಂಡು ಮಾತನಾಡುವುದು ವಿಚಿತ್ರವಾಗಿದೆ.

ವಿಷ್ಣು : ಮಹರ್ಷಿ! ಅಪಚಾರವಾಯಿತು! ನೀವೆಂದಂತೆ...... ನಿತ್ಯ ಶ್ರೀ ಪರಿರಂಭಣ ಕ್ರಿಯಾ ಕಠೋರವಾದ ನನ್ನ ವಕ್ಷವನ್ನು ತಾಕಿ ತಮ್ಮ ಪಾದಗಳು ಎಷ್ಟು ನೊಂದಿರಬೇಕು. ಉಪಚಾರ ಮಾಡಲು ಬಿಡಿ.



(ವಿಷ್ಣುವು ಭೃಗುವಿನ ಪಾದಗಳನ್ನು ಹಿಡಿದೊತ್ತಲು ಪ್ರಯತ್ನಿಸುತ್ತಾನೆ.)

ಲಕ್ಷ್ಮಿ: ಪ್ರಾಣೇಶ್ವರ! ತಾವು ಮಾಡುವ ಕೆಲಸದ ಯುಕ್ತಾಯುಕ್ತತೆಗಳನ್ನು ವಿಚಾರಿಸಿ ಮಾಡಿರಿ. ನಿತ್ಯಾನಪಾಯಿನಿಯೆಂದು ತುಂಬು ಮನದಿಂದ ತಾವು ಆವಾಸ ಕಲ್ಪಿಸಿದ ನನ್ನ ಭದ್ರಪೀಠವನ್ನು ಒಬ್ಬ ಋಷಿ ವ್ರಾತ್ಯನು ತಾಡಿಸಿದನೆಂದರೆ ಅದನ್ನು ಸಹಿಸಿ ಅವನನ್ನು ಸಮಾಧಾನಗೊಳಿಸಲೆತ್ನಿಸುವುದು ನಿಮಗೆ ಚೆನ್ನಾಗಿರಬಹುದಾದರೂ ನನ್ನನ್ನು ಮಾತ್ರ ಶಾಶ್ವತವಾಗಿ ದೂರಮಾಡುತ್ತದೆ.

ವಿಷ್ಣು : ಸ್ವಲ್ಪ ಇರು ದೇವಿ! ಅತಿಥಿ ಸತ್ಕಾರದಲ್ಲಿ ಪಾದಸೇವನೆ ಆಶ್ಚರ್ಯ ಅಲ್ಲವಲ್ಲ! ಸರ್ವಶಾಸ್ತ್ರವಿದನೂ ತಪೋನಿಷ್ಠಾಗರಿಷ್ಠನೂ ಆದ ಮುನಿಪೋತ್ತಮನು ಹೀಗೆ ಇಷ್ಟುದೂರ ಬಂದದ್ದಕ್ಕಾದರೂ ಉಚಿತ ಮರ್ಯಾದೆಯಿಂದ ಪುರಸ್ಕರಿಸುವುದು ನ್ಯಾಯವಲ್ಲವೇ! ಆದ್ದರಿಂದ ನಿನ್ನ ಸಹನೆ ನಮಗೆ....... ಮಹರ್ಷಿ.

(ಲಕ್ಷ್ಮಿ ಭೃಗುವಿನತ್ತ ಕೋಪದಿಂದ ನೋಡುತ್ತ ನಿಷ್ಕ್ರಮಿಸುವಳು. ವಿಷ್ಣುವು ಭೃಗುವಿನ ಪಾದಗಳನ್ನು ಒತ್ತುತ್ತಲೇ ಅವನ ಪಾದದಲ್ಲಿದ್ದ ಕಣ್ಣನ್ನು ಭಗ್ನಗೊಳಿಸುತ್ತಾನೆ)

ಭೃಗು : (ನೋವಿನಿಂದ) ಪಾಪಿ ! ಎಂತಹ ಕೆಲಸಮಾಡಿದೆ. ಅಲ್ಲಲ್ಲ ನಾನೇ ಪಾಪಿ. ಯುಕ್ತಾಯುಕ್ತ ವಿಚಕ್ಷಣೆಯಿಲ್ಲದೆ ಮದಾಂಧನಾಗಿ ಸರ್ವದೇವತಾ ಸಮ್ಮಾನಿತವಾದ ವೈಕುಂಠವನ್ನು ಅಕ್ರಮವಾಗಿ ಪ್ರವೇಶಿಸಿ, ಸರ್ವಶುಭಕಾರಕವೂ, ನಿತ್ಯ ಶ್ರೀ ಸಮನ್ವಿತವೂ ಆದ ತಮ್ಮ ವಕ್ಷಸ್ಥಳವನ್ನು ನನ್ನ ಪಾದಾಘಾತಕ್ಕೆ ಗುರಿಮಾಡಿ, ತಮಗೂ ಶ್ರೀ ದೇವಿಗೂ ತೊಂದರೆ ನೀಡಿ ಪತಿತನಾದೆ.

ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನೂ, ಆದಿಮಧ್ಯಾಂತರಹಿತನೂ ಸರ್ವತಂತ್ರ ಸ್ವತಂತ್ರನೂ ಆದ ನಿನ್ನನ್ನು ಕೇವಲ ಅಜ್ಞಾನದಿಂದ, ಅಪರಿಪಕ್ವ ಪಾಂಡಿತ್ಯದಿಂದ ಆತ್ಮ ಘಾತಕವಾದ ಅಹಂಕಾರದಿಂದ, ಮಲಿನ ಮನದವನಾಗಿ ನಿಂದ್ಯಾತಿ ನಿಂದ್ಯವಾದ ಅಪರಾಧ ಮಾಡಿದ ನನಗೆ ನಿಷ್ಕೃತಿಯಿಲ್ಲ. ಈ ಪಾಪಭಾರವನ್ನು ಈ ಶರೀರ ಇನ್ನು ಹೊರಲಾರದು. ಈ ಶರೀರ ಹೀಗಿರಬಾರದು. (ಭೃಗುವು ತನ್ನ ಕಮಂಡಲದಿಂದ ನೀರು ಕೈಗೆ ತೆಗೆದುಕೊಂಡು ತನ್ನ ಮೇಲೆಯೇ ಹಾಕಿಕೊಳ್ಳುತ್ತಾನೆ. ವಿಷ್ಣುವು ಕೈ ಅಡ್ಡ ನೀಡಿ ತಡೆಯುತ್ತಾನೆ.)

ವಿಷ್ಣು : ಮುನೀಂದ್ರ! ಆವೇಶ ಪಡಬೇಡ. ಈ ವಿಶ್ವ ಮಾಯಾವೃತವಾಗಿದೆಯೆಂಬುದನ್ನು ಗ್ರಹಿಸು. ಇಲ್ಲಿ ನೀನು ನಿಮಿತ್ತ ಮಾತ್ರ. ಇನ್ನು ಆಂದೋಳನ ಹೊಂದದೆ ಬಂದ ಕಾರ್ಯವನ್ನು ತಿಳಿಸು.

ಭೃಗು : ಸರ್ವಜ್ಞ ನಿನಗೆ ತಿಳಿಯದಿರುವುದೇನಿದೆ? ಲೋಕಕಲ್ಯಾಣಕ್ಕಾಗಿ ನಡೆಯುವ ಸತ್ರಯಾಗದಲ್ಲಿ ಫಲಭೋಕ್ತೃವಿನ ವಿಷಯದಲ್ಲಿ ಉಂಟಾದ ಸಮಸ್ಯಾಪರಿಹಾರಕ್ಕಾಗಿ ಸರ್ವಗುಣಾಧಿಕನಾದ ದೇವರನ್ನು ಹುಡುಕಿಕೊಂಡು ನಿರ್ಣಯಿಸಲು ಮಹರ್ಷಿಗಳ ಪರವಾಗಿ ನಾನು ಬಂದಿರುವೆ.

ವಿಷ್ಣು : (ತನ್ನಲ್ಲಿ ನಗುತ್ತ) ನಾರದನ ನಾಟಕ ರಸಘಟ್ಟದಲ್ಲಿ ಬಿದ್ದಂತಿದೆ. (ಭೃಗುವಿಗೆ) ಇಷ್ಟಕ್ಕೂ ತಮ್ಮ ಸಮಸ್ಯೆ ಪರಿಹಾರವಾಯಿತೇನು?

ಭೃಗು : ಜಗನ್ನಾಥ! ಇನ್ನೂ ನನ್ನ ಬಗ್ಗೆ ಕೋಪ ಹೋಗಲಿಲ್ಲವೇ? ಪಾಪಿ ಎಷ್ಟು ಪಾಪಮಾಡಿದರೂ ಸಹಿಸಬಲ್ಲ, ನಿನಗಿಂತ ಸತ್ವಗುಣಾಲಯನು ದೇರಾರು? ಆದ್ದರಿಂದ ನೀನೇ ಯಜ್ಞೇಶ್ವರನಾಗಿ ಅನುಗ್ರಹಿಸಬೇಕು. ಹೋಗಿಬರುವೆ.

ವಿಷ್ಣು : ಒಳಿತಕ್ಕೆ - ಹೋಗಿ ಬಾ (ಭೃಗುವು ಹೊರಡುವನು. ವಿಷ್ಣುವು ಮುಂದುವರೆದು ಶೇಷಶಯನದ ಮೇಲೆ ಕುಳಿತು ಕೊಳ್ಳುತ್ತಾನೆ.) ಲಕ್ಷ್ಮಿ ಮುನಿ ಇಲ್ಲಿಂದ ಹೊರಟ, ನೀನು ಬರಬಾರದೇ?

(ಲಕ್ಷ್ಮಿ ಒಳಬಂದು ಶಯನದ ಹತ್ತಿರ ನಿಲ್ಲುತ್ತಾಳೆ. ವಿಷ್ಣು ಎದ್ದು ಬಂದು ಲಕ್ಷ್ಮಿಯ ಹತ್ತಿರ ಬಂದು)

ವಿಷ್ಣು : ಶ್ರೀದೇವಿಯ ಮುಖದಲ್ಲಿ ಕಿರುನಗೆಯ ಬೆಳದಿಂಗಳು ಬಂದಿಲ್ಲವೇಕೆ? ಇನ್ನೂ ಕೋಪವೇ?

(ಲಕ್ಷ್ಮಿಯು ಮುಖ ತಿರುಗಿಸಿ ನಿಲ್ಲುವಳು)

ವಿಷ್ಣು : ಅನುರಾಗದ ದೇವಿಯ ಕುಡಿನೋಟವಿಂದು ನಮಗೆ ಮಧುರ ಚಂದನ ಲೇಪವಾಯಿತು. (ಹತ್ತಿರ ಬರುತ್ತಾನೆ)

ಲಕ್ಷ್ಮಿ: ಅನುರಾಗವತಿ ನಿಲಯವಾದ ಪ್ರಭುವಿಗೆ ಮುದ್ದಾಗಿದೆ ಒರಟು ಮುನಿಯ ಪಾದ ಮುದ್ರೆ (ದೂರ ಸರಿಯುತ್ತಾಳೆ)

ವಿಷ್ಣು : ಆಂ! ಏನು! ಇನ್ನೂ ಕೋಪವೇ (ಲಕ್ಷ್ಮಿಯನ್ನು ಬಳಿ ಸೆಳೆಯಲು ಪ್ರಯತ್ನಿಸುತ್ತಾನೆ)

ಲಕ್ಷ್ಮಿ: (ಎರಡು ಹೆಜ್ಜೆ ಹಿಂದೆ ಹಾಕಿ) ಪ್ರಾಣೇಶ್ವರ! ಕ್ಷಮೆಯಿರಲಿ. ಯಾವುದೊ ತಿಳಿಯದ ನೋವು ನನ್ನ ಹೃದಯವನ್ನು ಸುಡುತ್ತಿದೆ. ಇನ್ನೂ ಈ ಸ್ಥಳ ನಿನ್ನದಲ್ಲ ಎಂದು ನನಗೆ ಹೇಳುವಂತಿದೆ. ಇಲ್ಲಿ ತಮ್ಮಿಂದ ದೂರವಾಗಿ ನಾನಿರಲಾರೆ. ಹಾಗಾಗಿ ನರಪಾದಾಘಾತ ಸಂದಷ್ಟವಾದ ಆ ಸ್ಥಳ ನನ್ನ ಸ್ಥಳವೆಂದುಕೊಳ್ಳುವುದಕ್ಕಿಂತ ಎಲ್ಲಿಯಾದರೂ ತಮ್ಮ ಪಾದಾರವಿಂದ ಧ್ಯಾನದಲ್ಲಿ ಕಾಲ ಕಳೆಯುವುದೇ ನನಗೆ ಸೂಕ್ತವೆನಿಸುತ್ತದೆ. ಕ್ಷಮಿಸಿ ಅಪ್ಪಣೆ ನೀಡಿರಿ (ನಮಸ್ಕರಿಸಿ ನಿಷ್ಕ್ರಮಿಸುವಳು).

ವಿಷ್ಣು : (ಲಕ್ಷ್ಮಿ ಹೋದ ದಿಕ್ಕನ್ನೇ ನೋಡಿ ನಂತರ ವೈಕುಂಠವನ್ನು ಪರೀಕ್ಷಿಸುವಂತೆ ಸುತ್ತಲೂ ನೋಡುವನು.) ಲಕ್ಷ್ಮಿಯಿಲ್ಲದ ವೈಕುಂಠ ಸೌಭಾಗ್ಯವನ್ನು ಕಳೆದುಕೊಂಡಿದೆ. ಅನುಕೂಲವತಿಯಿಲ್ಲದ ಜೀವನ ಅಡವಿಯ ಒಬ್ಬಂಟಿತನದ ಬದುಕೇ ಅಲ್ಲವೇ. ಮತ್ತೆ ವೈಕುಂಠವು ತೇಜೋಮಯವಾಗಬೇಕಾದರೆ ನಾನು ಶ್ರೀನಿವಾಸನೆಂಬ ಹೆಸರನ್ನು ಸಾರ್ಥಕಗೊಳಿಸಿಕೊಳ್ಳಬೇಕು.

(ವಿಷ್ಣುವು ನಿಷ್ಕ್ರಮಿಸುವನು)

-- ತೆರೆ --

## ಮೂರನೇ ಅಂಕ ೧ನೇ ರಂಗ

(ಅಡವಿಯ ಪ್ರದೇಶ; ಲಕ್ಷ್ಮಿಯ ಪ್ರವೇಶ)

ಲಕ್ಷ್ಮಿ: ವಿಧಿಯೆಂದರೇನೆಂಬುದು ಇಂದಿಗೆ ತಿಳಿಯಿತಲ್ಲ. ಅನಂತ ಕಲ್ಯಾಣ ಗುಣಧಾಮನೂ ಸರ್ವ ಜಗನ್ನಿಯಾಮಕನೂ ಆದ ವೈಕುಂಠನ ವಕ್ಷಪೀಠವನ್ನಲಂಕರಿಸಿ ಸರ್ವಜಗತ್ಸೌಭಾಗ್ಯ ಸಂಧಾಯಿನಿಯಾಗಿ ಪ್ರಸಿದ್ಧಳಾದ ನಾನು, ಇಂದಿಗೆ ಈ ದಟ್ಟಡವಿಯಲ್ಲಿ ತಿರುಗಬೇಕಾಗಿ ಬಂದಿದೆ. ಸರ್ವವಿಜ್ಞಾನ ಸಂಪನ್ನನಾದ ಮುನಿಪುಂಗವನ ಕ್ಷಣಿಕ ದೌರ್ಬಲ್ಯ ಇಷ್ಟು ಮಾಡಿದೆ. ಬೇಡಬೇಡವೆಂದರೂ ನಾಥನನ್ನು ಬಿಟ್ಟುಬಂದೆ. ವೈಕುಂಠಪತಿ ಹೇಗಿರುವನೋ ಏನೋ? ಹೇಗಿದ್ದರೂ ನಾನೇನು ಮಾಡಬಲ್ಲೆ. ನರ ಪಾದಾಘಾತ ಸಂದಷ್ಟವಾದ ಆ ಸ್ಥಳವನ್ನು ಬಯಸುವುದಕ್ಕಿಂತ ನಾಥನ ಚರಣಾರವಿಂದ ಧ್ಯಾನದಲ್ಲಿಯೇ ಈ ಕಾಲ ಕಳೆಯುವುದು ಉತ್ತಮ....... ಆದರೂ ಅವರು ಹೇಗಿದ್ದಾರೋ ಏನೋ! (ಮುಂದೆ ಬಂದು ಒಂದು ಕಲ್ಲು ಹಾಸಿನ ಮೇಲೆ ಕೂರುವಳು ಸೂರ್ಯ ಪ್ರವೇಶಿಸುತ್ತಾನೆ.)

ಸೂರ್ಯ : ಕಾಲಗತಿ ಎಷ್ಟು ವಿಚಿತ್ರವಾದದ್ದು. ಇಲ್ಲದಿದ್ದರೆ, ಸರ್ವಲೋಕ ಸಾಮ್ರಾಜ್ಯಾಧಿಪತಿಯ ಅರ್ಧಾಂಗಿ, ಸುರ, ಯಕ್ಷ, ಗರುಡ, ಕಿನ್ನರ, ಕಿಂಪುರುಷ, ಸಿದ್ಧ, ಸಾಧ್ಯ, ವಿದ್ಯಾಧರಾದಿ ದಿವ್ಯ ಪುರುಷ ಮಣಿಮಯಮಕುಟನೀರಾಜನಪ್ರಭಾಸ ಮುಜ್ವಲಿತಾಂಘ್ರಿಯಾಗಿ ಶೋಭಿಸುವ ಆದಿಲಕ್ಷ್ಮಿ ಚತುರ್ದಶ ಭುವನ ಕಾರುಣ್ಯೈಕ ಮೂರ್ತಿ ಇಂದು

ಈ ಕಾಡಿನಲ್ಲಿ ಕಲ್ಲಮೇಲೆ ಕುಳಿತು ಚಿಂತಿಸುವುದೇ?! (ಲಕ್ಷ್ಮಿಯ ಕಡೆಗೆ ತಿರುಗಿ) ಜಗನ್ಮಾತೆ! ನಮಸ್ಕಾರ.

ಲಕ್ಷ್ಮಿ: (ಸೂರ್ಯನತ್ತ ನೋಡಿ) ಕರ್ಮಸಾಕ್ಷಿ ದಿವಿಯಿಂದ ಭುವಿಗಿಳಿದು ಬಂದೆಯೇಕೆ? ವೈಕುಂಠಪತಿ ಕ್ಷೇಮವೇ?

ಸೂರ್ಯ : ಏನೆಂದು ಹೇಳಲಿ ತಾಯಿ! ಏನು ಹೇಳಲೂ ಬಾಯಿಬರದು. ತಾವು ಬಿಟ್ಟು ಬಂದ ವೈಕುಂಠ ತೇಜಹೀನವಾಗಿದೆ. ಈಗ ಅದು ದೈವವಿಲ್ಲದ ಗುಡಿಯಾಗಿದೆ.

ಲಕ್ಷ್ಮಿ: (ಎದ್ದು ನಿಂತು) ಏನೆಂದೆ ತಂದೆ! ವೈಕುಂಠ ಕಳೆಗುಂದಿತೆ? ದೇವ ದೇವನು ಅಲ್ಲಿಲ್ಲವೇ ?

ಸೂರ್ಯ : ಸಿರಿಯಿಲ್ಲದ ವೈಕುಂಠ ತನಗೆ ದೇಡವೆಂದು ಶ್ರೀಪತಿ ಭೂಮಿಗಿಳಿದು ಬಂದರು.

ಲಕ್ಷ್ಮಿ: ಏನು! ದೇವರು ಭೂಮಿಯಲ್ಲಿದ್ದಾರೆಯೆ! ಎಲ್ಲಿ ?

ಸೂರ್ಯ : ಅಮರಾಧೀಶ ಸಮರ್ಚಿತ ಪಾದಾರವಿಂದನಾದ ಶ್ರೀಪತಿ ದಿವಿಯಲ್ಲಿರಲು ಇಷ್ಟಪಡದೆ ಭುವಿಗಿಳಿದು ಪಾಪನಾಶನಾಚಲ ಸೇರಿ, ಅಲ್ಲಿರುವ ಹುಣಿಸೇಮರದ ನೆರಳಿನಲ್ಲಿ ಹಸಿವು, ನೀರಡಿಕೆ ತಿಳಿಯದೆ, ಸುತ್ತ ಹುತ್ತಗಟ್ಟಿದರೂ ತಿಳಿಯದೆ ತಮ್ಮ ಧ್ಯಾನದಲ್ಲಿಯೇ ನಿಮಗ್ನರಾಗಿದ್ದಾರೆ.

ಲಕ್ಷ್ಮಿ: ಸರ್ವಜಗನ್ನಾಥನು ಅನಾಥರಂತೆ - ಹಸಿವು ನೀರಡಿಕೆಗಳಿಂದ ಬಳಲುವುದೇ ? ಸಹಿಸಲಾಗದು.

ಸೂರ್ಯ : ಕರ್ಮಸಾಕ್ಷಿಯಾದ್ದರಿಂದ ನನ್ನ ಧರ್ಮವನ್ನು ನಾನು ನಿರ್ವಹಿಸಿದೆ. ಇನ್ನು ದೇವರ ದೇವನನ್ನು ಸೇವಿಸುವ ಮಾರ್ಗ ಹುಡುಕದಿದ್ದಲ್ಲಿ ಜಗತ್ಪ್ರಳಯ ತಪ್ಪದು.

ಲಕ್ಷ್ಮಿ: ನಿಜವೇ! ಆದರೆ ಕಳವಳದಿಂದಿರುವ ನನಗೆ ಉಪಾಯ ತಿಳಿಯದಾಗಿದೆ.

ಸೂರ್ಯ : ತಾಯಿ! ಇಂತಹ ಸಮಯಗಳಲ್ಲಿ ನೆರವು ನೀಡುವವರು ಇಬ್ಬರೇ. ಅತ್ತ ನೋಡಿ, ಜಗತ್ ಸೃಷ್ಟಿಕಾರರಾದ ಪಿತಾಮರೂ, ಸರ್ವಜ್ಞರಾದ ಶಂಕರರೂ ಇತ್ತಲೇ ಬರುತ್ತಿದ್ದಾರೆ. ಇನ್ನು ನನಗೆ ಅಪ್ಪಣೆ ಕೊಡಿ. ನಾನು ಹೋಗಿ ಬರುತ್ತೇನೆ. (ಸೂರ್ಯ ಹೊರ ಹೋಗುತ್ತಾನೆ. ಬ್ರಹ್ಮ ಈಶ್ವರರು ಪ್ರವೇಶಿಸುತ್ತಾರೆ.)

ಬ್ರಹ್ಮ: ಜನನಿ; ನಮಸ್ಕಾರ.

ಶಂಕರ : ಲೋಕ ಪಾವನಿ! ನಿನ್ನ ದರ್ಶನದಿಂದ ನಮಗೆ ಹೊಸದಾರಿ ತಿಳಿಯಿತು.

ಲಕ್ಷ್ಮಿ: ಮಹಾದೇವ, ವಿರಿಂಚಿ! ಭೃಗು ಮಹರ್ಷಿಯ ಕಾರಣದಿಂದಾಗಿ ನಾನು ವೈಕುಂಠವನ್ನು ಬಿಟ್ಟಿದ್ದೂ, ಶ್ರೀ ಧಾಮರು ಭೂಮಿಗಿಳಿದು ಧ್ಯಾನ ಮಗ್ನರಾಗಿರುವುದೂ ನಿಮಗೆ ತಿಳಿದಿರಬಹುದು.

ಶಿವ : ತಿಳಿಯದೇನು ತಾಯಿ! (ಕೋಪದಿಂದ) ಆ ಭೃಗುವಿನಿಂದಾಗಿಯೇ ಬ್ರಹ್ಮನಿಗೆ ಪೂಜಾರಾಹಿತ್ಯ ನನಗೆ ಸಾಕಾರಪೂಜಾ ನಿಷೇಧ - ಪ್ರಾಪ್ತವಾಗಿದೆ. ಆತ ನಾರಾಯಣಾಂಶಜನೇ ಅಲ್ಲದೆ ಹೋಗಿದ್ದಲ್ಲಿ........

ಬ್ರಹ್ಮ: (ಮಧ್ಯೆ ಪ್ರವೇಶಿಸಿ) ತ್ರಿನೇತ್ರಾ! ಅಪಾರ ತಪೋಬಲ ಸಂಪನ್ನನಾದರೂ ಬ್ರಹ್ಮನನ್ನು ತಿಳಿದಿದ್ದರೂ ಆತ ವಿಧಿವಶನಾಧವ.

ಲಕ್ಷ್ಮಿ: ಆತ ಏನಾದರೇನು? ನನ್ನ ಸ್ವಾಮಿ ಹಸಿವು ಬಾಯಾರಿಕೆಗಳಿಂದ ದೇಹ- ಧ್ಯಾನವೇ ಇಲ್ಲದವನಂತಿರುವನಂತೆ! ಇದಕ್ಕೆ ಪರಿಹಾರೋಪಾಯ ಹುಡುಕಬೇಕು.

ಶಿವ : ವೈಕುಂಠ ಪತಿ ಭುವಿಗೆ ಇಳಿದದ್ದು ತಿಳಿದಾಗಿನಿಂದ ಆತನ ಸೇವೆಯಲ್ಲಿ ನಮ್ಮ ಕೈಲಾದದ್ದು ಮಾಡಬೇಕೆಂದುಕೊಂಡು ಬರುತ್ತಿದ್ದಾಗಲೇ ನಿನ್ನ ದರ್ಶನವಾಯಿತು.

ಬ್ರಹ್ಮ: ತಾಯಿ! ನಾವಿಬ್ಬರೂ ಹಸುಕರುಗಳಾಗುತ್ತೇವೆ. ತಾವು ಗೋವಳಗಿತ್ತಿಯಾಗಿ ಈ ದೇಶವನ್ನು ಆಳುವ ರಾಜನಿಗೆ ನಮ್ಮನ್ನು ವಿಕ್ರಯಿಸು; ಮಿಕ್ಕದ್ದು ನಾವು ನಾವು ನೋಡಿಕೊಳ್ಳುತ್ತೇವೆ.

ಲಕ್ಷ್ಮಿ: ಇದು ಚೆನ್ನಾಗಿದೆ. ಶ್ರೀನಿವಾಸನ ಆರಾಧನಾ ಯಜ್ಞದಲ್ಲಿ ನಮ್ಮ ಕರ್ತವ್ಯವನ್ನು ನಿರ್ವಹಿಸುವ (ಮೂವರೂ ಮುಂದೆ ಬಂದು ನಿಷ್ಕ್ರಮಿಸುವರು.)

(ತೆರೆ)

## ಎರಡನೇ ರಂಗ

(ಕಾಡಿನ ಪ್ರದೇಶ ಗೋವಳನ ಪ್ರವೇಶ)

ಗೊಲ್ಲ : ಹೇಯ್, ಹೇಯ್, ನೇರಕ್ಕೆ ನಡಿ, ಆಂ! ಹಾಗಿರು. ತಾಯಿ ನೀನು ಬಹಳ ಒಳ್ಳೆಯವಳು. ಮುದ್ದಾಗಿ ಸುಂದರವಾಗಿರುವೆ. ನಮ್ಮ ಮಹಾರಾಜರು ನಿನ್ನನ್ನು ಕಾಮಧೇನು ಎಂದರು. ಎಂತಲೇ ಜಾಗ್ರತೆಯಾಗಿ ನೋಡಿಕೋ ಎಂದರು. ನೀನು ಇಲ್ಲಿಂದ ಕದಲಬೇಡ. ಮಹಾರಾಜರು ಕೇಳಿದರೆ ಪ್ರಾಣ ತೆಗೆಯುವರು.

ಲಕ್ಷ್ಮಮ್ಮನಂತೆ! ಆ ಮಹಾತಾಯಿ ಎಂದು ನಿನ್ನನ್ನು ಕೊಟ್ಟಳೋ ಏನೋ! ಅಂದಿನಿಂದ ನೀನು ಹಾಲುಕೊಡಲಿಲ್ಲವೇನೋ! ಮಹಾರಾಜರೇನೋ ನಾನೇ ಕುಡಿದಿರಬೇಕೆಂದು ಬಯ್ಯುತ್ತಿದ್ದಾರೆ. ಇವರ ಮೇಲೆ ರಾಣಿಯವರು 'ಏನೋ ಗೊಲ್ಲ' ಇಷ್ಟಪಟ್ಟು ಕೊಂಡ ಹಸುವಿನ ಹಾಲು ಮಕ್ಕಳಿಗೂ ಕೊಡದೆ ನೀನೇ ಕುಡಿಯುತ್ತಿದ್ದೀಯೆ......... ಎಚ್ಚರಿಕೆ - ಎಂದು ಕೋಪಿಸಿಕೊಳ್ಳುತ್ತಿದ್ದಾರೆ. ಬರೇ ಬಯ್ಗುಳವೇ ಏನು ? ಮೊನ್ನೆ ದೇಹಶುದ್ಧಿಯೂ ಆಯಿತಲ್ಲ. ತಾಯಿ, ನಿನಗೆ ನಮಸ್ಕಾರ ಮಾಡುವೆ. ನಮ್ಮ ರಾಜ ಕೇಳಿದರೆ ಪ್ರಾಣ ತೆಗೆಯುತ್ತಾರೆ.

ಅದು ಸರಿಯೇ! ನೋಡಿದರೆ ನಂಬಲಾಗದು. ರಾಜರೇನೋ ಇದು ಹಾಲನ್ನೇ ಕೊಡುವುದಿಲ್ಲವೆನ್ನುತ್ತಾರೆ. ಮುದ್ದಾದ ಮುಂದೊವಲು, ಕುಂಭಗಳಂತಹ ಕೆಚ್ಚಲು, ಮುದ್ದು ತರುವ ಮುಖ..... ಹಾಲು ಕೊಡುವುದಿಲ್ಲವೆನ್ನುತ್ತಾರೇಕೆ? ಆದರೂ ನೋಡುವೆನಲ್ಲ ಇದು ಎಲ್ಲಿಗೆ ಹೋಗುವುದೋ ಏನೋ? ನಮ್ಮ ರಾಜ ನೋಡಿದರೆ ಪ್ರಾಣ ತೆಗೆಯುತ್ತಾರೆ. ಆದರೂ ಇದು ಹಸುವೇ? ಲಕ್ಷ್ಮಿ ಅಲ್ಲವೇ? (ಹಾಡುತ್ತಾನೆ-)

ಆಂ......... ಆಂ............

ಗೋವು ಮಹಾಲಕ್ಷ್ಮುಮಿ ನೂರು ನಮನಗಳು
ಗೊಲ್ಲರ ಮನೆಗಳಲಿ ಕೋಟಿ ದೀಪಗಳು

ಕರಿ ಹಸುವು ಬಿಳಿ ಹಸುವು
ಕಡು ಚೆಲುವಿನ ಹಸುವು
ನರುಗೆಂಪು ನಸುಬಿಳುಪು ನಾಣ್ಯವಾದಾ ಹಸುವು
ತಪ್ಪುಗಳಿದ್ದರೂ, ಹೆಚ್ಚು ಹೇಳಿದರೂ
ಎದೆಯಲ್ಲಿ ತುಂಬುವುದು ಅಮೃತದ ಹಾಲು
|| ಗೋವು ||

ಹಸಿವು ಹೆಚ್ಚಿರಲೂ, ಹಸಿವಿಲ್ಲದಿರಲೂ
ರೋಗ ಹೆಚ್ಚಾಗಿರಲು, ರಾಗವಕ್ಕರೆಯಿರಲೂ
ಎಲ್ಲಕ್ಕು ಮಿಗಿಲಣ್ಣ ಹಸುವ ಹಾಲಣ್ಣ
ಆದರದಿ ನಮಿಸಿದರೆ ಮತ್ತೆ ಹೆಚ್ಚುವುದಣ್ಣ
|| ಗೋವು ||

ಅಂದೊಮ್ಮೆ ಕೃಷ್ಣಯ್ಯ ಹಸುಗಳನು ಮೇಯಿಸಿ
ಗೊಲ್ಲ ಕುಲವನ್ನೆಲ್ಲ ಮೇಲಕೆತ್ತಿದನಂತೆ
ಜಾತಿ ಎಷ್ಟಿದ್ದರೂ ನೀತಿ ಎನಿತಿದ್ದರೂ
ಮನಸಿರುವ ಮನುಜನಿಗೆ ಒಳ್ಳೆ ಮಾತೇಸಾಕು
|| ಗೋವು ||

(ಹಾಡು ನಿಲ್ಲಿಸಿ, ಸುತ್ತ ನೋಡುತ್ತ) ಅರೆ...... ಹಸು ಎಲ್ಲಿ ಹೋಯಿತು. ಅಮ್ಮಮ್ಮ ಅದೋ ಗುಪ್ತ ಹತ್ತುತ್ತಿದೆ. ಹುತ್ತದ ಹತ್ತಿರಕ್ಕೆ ಹೋಯಿತೇಕೆ? ಹಾವು ಕಚ್ಚಿದರೇ? ನಮ್ಮ ರಾಜ ಕೇಳಿದರೆ ಪ್ರಾಣ ತೆಗೆಯು ವರಲ್ಲ (ಒಂದು ಹೆಜ್ಜೆ ಮುಂದಿಟ್ಟು ನಿದಾನವಾಗಿ ನೋಡಿ) ಇದೇನು ವ್ಯವಹಾರ. ಅಲ್ಲಿ ತೊಂಡು ಮೇಯ್ದು ಇಲ್ಲಿ ಹಾಲನ್ನು ಹುತ್ತದಲ್ಲಿ ಹರಿಸುತ್ತಿರುವೆ ಯಲ್ಲ. ಇರು, ನಿನ್ನನ್ನು ಗಮನಿಸಿಕೊಳ್ಳುವೆ. ನಮ್ಮ ರಾಜ ಕೇಳಿದರೆ ಪ್ರಾಣ ತೆಗೆಯುವರು (ಎನ್ನುತ್ತ ಕೈಲಿದ್ದ ಕೊಡಲಿಯನ್ನು ಬೀಸಿ ಎಸೆಯುತ್ತಾನೆ)

(ತೆರೆಯಲ್ಲಿ ಅಯ್ಯಯ್ಯೋ ಎಂಬ ಧ್ವನಿ)

ಅಮ್ಮಮ್ಮ ನನಗೆ ಏನುದಾರಿ? ಹಸುವನ್ನು ಹೊಡೆಯ ಹೋಗಿ ಅಯ್ಯನವರನ್ನು ಹೊಡೆದು ಬಿಟ್ಟೆ. ಅಯ್ಯೋ ಮನುಷ್ಯನನ್ನು ಹೊಡೆದೆ! ಪಾಪ ವಾಯಿತಲ್ಲ. ನನಗೆ ಯಾವುದು ದಾರಿ ದೇವರೇ!

(ಮೂರ್ಛೆ ಬೀಳುತ್ತಾನೆ)

(ತೆರೆ)

## ಮೂರನೆಯ ರಂಗ

(ಚೋಳರಾಜನ ದರ್ಬಾರು ರಾಜಪ್ರವೇಶದೊ ಡನೆ ವಂದಿಮಾಗಧಸ್ತುತಿ ಆರಂಭ) "ರಾಜಾಧಿ ರಾಜ ರಾಜಮಾರ್ತಾಂಡ, ಅರಿವೀರ ಭಯಂಕರ, ಅಪರ ಕಾಲಸ್ವರೂಪ, ಕರಿಕಾಲ ಕುಲಾವತಂಸ ಶ್ರೀ ಚೋಳ ವಂಶಾಂಬುಧಿಚಂದ್ರ, ವೀರ ಪ್ರತಾಪ ಚೋಳ ಭೂಪಾಲ - ಬಹು ಪರಾಕ್ ಬಹು ಪರಾಕ್" (ಮಂತ್ರಿ, ಸೇನಾನಿ ಸಾಮಂತಾದಿಗಳಿ ರುವ ಸಭೆಯಲ್ಲಿ ಮಹಾರಾಜ ಬರುತ್ತಾನೆ. ಒಳಕ್ಕೆ ಬಂದವನು ಸಿಂಹಾಸನಕ್ಕೆ ಸಭೆಗೆ ನಮಸ್ಕರಿಸಿ, ಆಸೀ ನನಾಗಿ, ಸಭಿಕರನ್ನು ಕೂರಲು ಸನ್ನೆ ಮಾಡುತ್ತಾನೆ.)

ರಾಜ : ಮಹಾಮಂತ್ರಿ ವಿಶೇಷಗಳೇನು ?

ಮಂತ್ರಿ : ಪ್ರಭುಗಳು ಆಲಿಸಬೇಕು. ತಮ್ಮ ಆಡ ಳಿತದಲ್ಲಿ ಎಲ್ಲವೂ ಸುವಿಶೇಷಗಳೇ. ಕಾಲಕ್ಕೆ ಸರಿ ಯಾದ ಮಳೆ, ಮಳೆಗೆ ತಕ್ಕ ಬೆಳೆ, ನ್ಯಾಯಧರ್ಮ ಬುದ್ಧಿಗಳಿಂದ ತಮ್ಮ ಆಜ್ಞೆಗೆ ತಲೆಬಾಗುವ ವೀರ ಶಿಖಾಮಣಿಗಳು. ಹೆತ್ತ ತಂದೆಗಿಂತಲೂ ಹೆಚ್ಚಾಗಿ ಗೌರವಿಸುವ ಪ್ರಜೆಗಳು. ಇಂತಹ ಅದೃಷ್ಟ ಯಾರಿಗೆ ಲಭ್ಯವಾದೀತು. ಮಹಾರಾಜ ನಾ ವಿಷ್ಣುಃ ಪೃಥವೀ ಪತಿಃ - ಎಂಬ ಮಾತು ಇಂದು ನಿಜವಾಗುತ್ತಿದೆ.

ಚೋಳರಾಜ : ಸಾಕು ಮಹಾಮಂತ್ರಿ ಸಾಕು. ಈ ಶ್ಲಾಘನೆಯೆಲ್ಲ ನಮ್ಮನ್ನು ನಡೆಸುವ ಪರಮಾತ್ಮನಿಗೆ ಸಲ್ಲಬೇಕು. ನಾವು ನಿಮಿತ್ತ ಮಾತ್ರರೇ.

ಮಂತ್ರಿ : ತಮ್ಮ ವಿನಯ ಸಂಪತ್ತಿನಿಂದ ನಿಜವಾ ಗಿಯೂ ಬಂಗಾರಕ್ಕೆ ಮೆರುಗು ನೀಡಿದಂತೆ ಆಗಿದೆ.

ಚೋಳ : ಸರಿ, ಸರಿ ಪ್ರಜೆಗಳಿಗೆ ಯಾವ ದುಃಖವೂ ಇಲ್ಲವೆಂಬುವದನ್ನು ಕೇಳುವುದು - ನನಗೆ ತೃಪ್ತಿಕರ. ಇನ್ನು ಇಂದಿನ ವಿಶೇಷವೇನಾದರೂ ಉಂಟೊ!

ಮಂತ್ರಿ : ಮಹಾಪ್ರಭು! ನಾಟ್ಯಕಲಾ ಪ್ರವೀಣೆ ಲವಂಗಲತೆ ತಮ್ಮ ದರ್ಶನಕ್ಕಾಗಿ ಕಾದಿದ್ದಾಳೆ. ತಮ್ಮ ಆಜ್ಞೆಯಾದರೆ ತನ್ನ ನೈಪುಣ್ಯವನ್ನು ಪ್ರದರ್ಶಿಸಲು ಸಿದ್ಧ.

ಚೋಳ : ಸಂದೇಹವೇನು! ಕಲಾಭಿರಕ್ಷಣೆ ಭೂಪಾಲರ ಕರ್ತವ್ಯವಲ್ಲವೆ. ಆಕೆಯ ನಾಟ್ಯವಿನ್ಯಾಸ ಅವಶ್ಯವಾಗಿ ನೋಡಬೇಕಾದದ್ದೇ.

ಮಂತ್ರಿ : (ಚಪ್ಪಾಳೆ ತಟ್ಟಿ, ಒಳಗೆ ಬಂದ ಭಟ ನಿಗೆ) ಲವಂಗಲತೆಯ ಪ್ರವೇಶವಾಗಲಿ. (ಲವಂಗ ಲತೆ ಒಳ ಬಂದು ರಾಜನಿಗೂ ಸಭೆಗೂ ನಮಸ್ಕರಿಸಿ ನರ್ತನ ಆರಂಭಿಸುವಳು. ನಾಟ್ಯಕ್ಕೆ ಅನುಗುಣವಾಗಿ ಹಾಡು ಕೇಳಿಬರುತ್ತದೆ.

ಎಲ್ಲಿ ಅವನು - ಆಳುವವನು
ಎಲ್ಲಿಹನೋ - ಕಂಡುಬರನು ||ಎಲ್ಲಿ||

ಜಗಗಳ ಜ್ಞಾನವು ಜಲನಿಧಿಗಿಳಿಯಲು
ಮೀನಿನ ರೂಪದಿ ನೀರಿಗೆ ಇಳಿಯುತ
ಜಗಗಳ ಕಾಯ್ದಾ ಜಲಜದಳಾಕ್ಷನು
ಮಂಗಳ ರೂಪನು ಮಾಧವ ದೇವನು ||ಎಲ್ಲಿ||

ಸುರವರ ಸಂಪದ ಕಡಲಲಿ ಮುಳುಗಲು
ಕೂರ್ಮನ ರೂಪದಿ ಕುಧರವ ತಡೆಯುತ
ಅಮೃತ ವಿತರಿಸಿ ಅಮರರ ಕಾಯ್ದನು
ಅಮೃತರೂಪನು ಆದಿ ದೇವನು ||ಎಲ್ಲಿ||

ಪೃಥಿಯನೆಲ್ಲವ ಹಿರಿಚಾಪೆಯೊಲೇ
ಕಡಗೆ ಸೆಳೆದಾ ಕನಕದ ನೇತ್ರನ
ವರಾಹರೂಪದಿ ಒರೆಸುತ ಬಿಸುಟವ
ಚತುರ ವಿಕ್ರಮನು ಚಕಿತ ಭೂಧರನು ||ಎಲ್ಲಿ||

ಎಲ್ಲಿರುವನೋಯೆನೆ ಎಲ್ಲೆಡೆ ತೋರುತ
ಅಸುರಡಿಂಭಕನ ಎಡೆ ಕಾಯಲು ತಾ
ನರಹರಿ ರೂಪದಿ ಕನಕ ಕಶ್ಯಪನ
ಕಡುಹುಡಿ ಮಾಡಿದ ಕರುಣಾಮಯನವ ||ಎಲ್ಲಿ||

ಅಚಲಬಲದಿಂದ ಮರರ ಗೆಲ್ದು
ಅಪಂಕರಿಸಿದಾ ಅಸುರನಾಯಕನ
ಮೂರಡಿ ದಾನದಿ ಸರ್ವವನಳೆಯುತ
ಮಿಂಚುತ ನಿಂತವನಸುರವಂಚಕನು ||ಎಲ್ಲಿ||

ತಂದೆಯ ಮಾತಿಗೆ ತಾಯಿಯ ಕೊಂದು
ಪಿತೃಹತ್ಯೆಗೆನೆ ಸೇಡನು ತೀರಿಸಿ
ಮೂರೇಳು ಬಾರಿ ರಾಜರ ನೊರೆಸಿದ
ಖಂಡನ ಭೀಮನು ಭೃಗು ಕುಲರಾಮನು ||ಎಲ್ಲಿ||

ಅತುಲಬಲದಿಂ ಭವನನು ಮೆಚ್ಚಿಸಿ
ಬಲದರ್ಪದಿ ತಾ ದಿವಿಜರ ಸೋಲಿಸಿ
ಹರಿಯನು ಸೇರಲು ದಯಿತೆಯ ಕದ್ದ
ರಾವಣ ಹಂತಕ ರಘುಕುಲ ಸೋಮನು ||ಎಲ್ಲಿ||

ಜನನದ ದಿನವೆ ಮಾಯೆಯ ಬೀಸಿ
ಕಂಸಾದಿಗಳನು ಖತಿಯಲಿ ತೀರಿಸಿ
ತಪಿಸಿದ ತರುಣಿಯರ ತಾಪವ ತೀರಿಸಿ
ಗೀತೆಯ ದೀಪವ ಬೆಳಗಿದ ಘನನು ||ಎಲ್ಲಿ||

ಜನ್ನದ ಹೆಸರಲಿ ಜರುಗುವ ಹಿಂಸೆಯ
ಶೂನ್ಯದ ಪುಣ್ಯದ ಭೂಲೋಕದಲಿ
ಜೀವಿಗಳೊಳಗಡೆ ದೇವನಿಹನೆಂದು
ಜಗತಿಗೆ ಸಾರಿದ ಕರುಣಾಲಯನು ||ಎಲ್ಲಿ||

(ನಾಟ್ಯ ಮುಗಿಯುವುದು. ಲವಂಗಲತೆ ನಮಿಸಿ ಕೈಕಟ್ಟಿ ನಿಲ್ಲುವಳು)

ಚೋಳ : ಭಲೆ! ಪರಮಾತ್ಮನ ಅವತಾರಗ ಳನ್ನು ವರ್ಣಿಸಿದ ನಿನ್ನ ಲಲಿತ ನಾಟ್ಯ ವಿನ್ಯಾಸವನ್ನು ನೋಡಿ ನಾವು ಸಂತಸದಿಂದ ಪುಲಕಿತರಾಗಿದ್ದೇವೆ. ನಮ್ಮ ಜನ್ಮ ಚರಿತಾರ್ಥವಾಯಿತು. (ಬಹುಮಾನ ನೀಡುತ್ತಾನೆ. ಲವಂಗಲತೆ ನಿರ್ಗಮಿಸುತ್ತಾಳೆ)

ದೂತ : (ಪ್ರವೇಶಿಸಿ) ಮಹಾಪ್ರಭುಗಳಿಗೆ ಜಯ ವಾಗಲಿ. ಗೂಢಚಾರಿ ವನಚರ ತಮ್ಮ ದರ್ಶನಕ್ಕೆ ಆಗಮಿಸಿ ನಿಂತಿದ್ದಾನೆ.

ಮಂತ್ರಿ : ಕೂಡಲೇ ಪ್ರವೇಶ ನೀಡು.

(ವನಚರ ಒಳಗೆ ಬರುತ್ತಾನೆ. ಭಟ ಹಿಂದೆ ಸರಿದು ನಿರ್ಗಮಿಸುತ್ತಾನೆ)

ವನಚರ : ಮಹಾರಾಜರಿಗೆ....... ಮಹಾರಾಜ ರಿಗೆ ಜ...... ಜ...... ಜಯ

ಮಂತ್ರಿ : ಏನು ಪ್ರಲಾಪ! ಮತ್ತೇರಿದೆಯೋ! ಮರೆ ಭ್ರಮಿಸಿದೆಯೋ ?

ವನಚರ : (ದೀರ್ಘವಾಗಿ ಉಸಿರು ತೆಗೆದು ಕೊಂಡು) ಆಳುವವರು ಕ್ಷಮಿಸಬೇಕು. ನಾನು

ನ್ನೋಡಿದ್ದು ಮನದಲ್ಲಿ ನಿಂತು ಮಾತು ಮರೆತು ಹೋಗಿದೆ.

ಮಂತ್ರಿ : ಭಯ ಬೇಡ. ವಿಷಯವನ್ನು ವಿವರಿಸು.

ವನಚರ : ಮಹಾರಾಣಿಯವರ ಅಪ್ಪಣೆಯ ಮೇರೆಗೆ ಗೋಪಾಲನನ್ನು ಹಿಂಬಾಲಿಸಿದೆ. ಪ್ರಭು ಕಾಮಧೇನು ಎಂದು ಗುರುತಿಸಿದ್ದ ಹಸುವು ನೇರವಾಗಿ ಒಂದು ಹುತ್ತದ ಬಳಿ ಸೇರಿ ಹುತ್ತದಲ್ಲಿ ಹಾಲನ್ನು ಹರಿಯಬಿಟ್ಟಿತು. ಗೋವಳನು ಅದನ್ನು ನೋಡಿ ಹಸುವನ್ನು ಹೊಡೆಯಲು ಹೋದಾಗ, ಹುತ್ತದಿಂದ ಹೊರಬಿದ್ದ ದಿವ್ಯಪುರುಷನೊಬ್ಬ ಹಸುವಿನ ಪೆಟ್ಟನ್ನು ತಾನೇ ತಿಂದ. ಗೋಪಾಲನು ನಿಶ್ಚೇಷ್ಟಿತನಾದ. ಕಾಮಧೇನುವನ್ನು ಕರೆತಂದಿದ್ದೇನೆ. ಇನ್ನು ತಮ್ಮ ಚಿತ್ತ.

ಚೋಳ : ಏನೆಂದೆ! ಹಸು ತಂತಾನೆ ಹುತ್ತದಲ್ಲಿ ಹಾಲು ಕರೆಯುವುದೇ? ಗೋವಳನು ದಂಡಿಸಹೋದರೆ ಯಾರೋ ದಿವ್ಯಪುರುಷ ಮಧ್ಯೆ ಬಂದು ದಂಡನೆ ಸ್ವೀಕರಿಸುವುದೇ? ಮಹಾಮಂತ್ರಿ ನನ್ನ ಮನಸ್ಸಿಗೇಕೋ ಕಳವಳವಾಗುತ್ತದೆ. ಆಲಸ್ಯದಿಂದ ಎಂತಹ ವಿಪರೀತವಾಗುವುದೋ? ನಾವು ಹೋಗಿ ಈ ವಿಚಿತ್ರವನ್ನು ತಿಳಿಯುವುದೇ ಮೇಲು.

ಮಂತ್ರಿ : ತಮ್ಮ ಆಜ್ಞೆ, ವನಚರ - ದಾರಿ ತೋರು.

(ತೆರೆ)

## ನಾಲ್ಕನೆಯ ರಂಗ

(ಕಾನನ ಪ್ರದೇಶ. ಅನುಚರರೊಡನೆ ಚೋಳರಾಜನ ಪ್ರವೇಶ)

ವನಚರ : ಮಹಾಪ್ರಭು! ಇಲ್ಲಿಯೇ....... ಹತ್ತಿರದ.......

ಮಂತ್ರಿ : ರಾಜಾ! ಇಲ್ಲಿ ಗೋವಳ ಬಿದ್ದಿದ್ದಾನೆ. ಕೊಡಲಿಯೂ ಪಕ್ಕದಲ್ಲೇ ಬಿದ್ದಿದೆ. ಅದರ ಮೇಲೆ ರಕ್ತದ ಗುರುತುಗಳಿವೆ; ಅದನ್ನು ಗಮನಿಸಿ.

ಚೋಳ : ಏನು ವಿಚಿತ್ರ; ಬೇರಾರೂ ಕಾಣಬರುವುದಿಲ್ಲ. ವನಚರ ಹೇಳಿದ ಆ ದಿವ್ಯಪುರುಷನೆಲ್ಲಿ?

ಶ್ರೀನಿವಾಸ : (ರಂಗದ ಮೇಲೆ ಬಂದು) ನರಾಧಮ! ಕಣ್ಣಿದ್ದರಲ್ಲವೇ ಕಂಡುಬರಲಿಕ್ಕೆ. ರಾಜನಾಗಿದ್ದು ಪ್ರಜೆಗಳನ್ನು ರಕ್ಷಿಸುವ ಹೊಣೆ ನಿನ್ನದಾಗಿದ್ದರೂ ನೀನು ಮಾಡಿದ್ದೇನು? ಸಕಲವನ್ನೂ ಪರಿತ್ಯಜಿಸಿ ಅನಾಥನಾಗಿ ಕಾಡು ಮೇಡು ಅಲೆಯುತ್ತಿದ್ದ ನನಗೆ ತುಸುವೇ ಕ್ಷೀರಸೇಚನೆ ಮಾಡಿದ್ದು ಅಪರಾಧವಾಯಿತೇ? ಆ ದೋಷಕ್ಕೆ ಪ್ರತಿಯಾಗಿ ಧರ್ಮಕ್ಕೆ ಇನ್ನೊಂದು ಹೆಸರಾದ ಗೋವನ್ನು ಕೊಡಲಿಯಿಂದ ಹೊಡೆಸುವುದೇ? ನೀನು ಪಾಪಿ, ದುರಾಚಾರಿ; ಅಧಿಕಾರೋನ್ಮತ್ತ ನಿನ್ನ ಈ ಪೈಶಾಚಿಕ ಕೃತ್ಯದಿಂದಾಗಿ ನೀನು ಕಲಿಯುಗಾಂತದ ವರೆಗೆ ಪಿಶಾಚಿಯಾಗಿರು.

ಚೋಳ : ಮಹಾನುಭಾವ! ಇದು ತಿಳಿದು ಉಂಟಾದ ತಪ್ಪಲ್ಲ. ಆದದ್ದು ಏನೆಂಬುದೇ ನನಗೆ ತಿಳಿಯದು. ನೀಲ ಮೋಹನಾಕಾರನಾಗಿ ನಿತ್ಯಸ್ಮಿತ ವದನಾರವಿಂದನಾದ ನೀನು ಯಾರೋ ಆಕಾಶದಿಂದ ಭೂಮಿಗಿಳಿದ ದೇವತೆಯಾಗಿರಬೇಕೆಂಬುದೇ ನಾನು ನಂಬುವೆನು. ದಿನವೂ ಶ್ರೀಮನ್ನಾರಾಯಣ ಚರಣಾರವಿಂದ ಸಂಸೇವನೆಯಲ್ಲಿ ಕಾಲ ಕಳೆಯುವ ನಾನು ತತ್ಪ್ರಭಾ ಭಾಸಿತವಾದ ನಿನ್ನ ದಿವ್ಯ ದೇಹವನ್ನು ಗಾಯಗೊಳಿಸಬಲ್ಲೆನೆ? ತಂದೆ! ತಿಳಿಯದೆ ಆದ ತಪ್ಪನ್ನು ಕ್ಷಮಿಸಿ ಶಾಪವನ್ನು ಉಪಸಂಹರಿಸಿಕೊ.

ಶ್ರೀನಿವಾಸ : ರಾಜ! ನಿನ್ನ ಭಕ್ತಿಗೆ ಮೆಚ್ಚಿದೆ. ಆದರೆ ಗೋಸೇವೆ, ಭೃತ್ಯರಕ್ಷಣೆಗಳು ನಿನ್ನ ಧರ್ಮವಾಗಿದ್ದರೂ, ಮುಗ್ಧ ಗೋವಳನನ್ನು ದಂಡಿಸಿದೆ. ಆತನಾದರೋ ಹಸುವನ್ನು ದಂಡಿಸಲು ಹೊರಟ. ಅಲ್ಲಿಯೇ ಧರ್ಮಭ್ರಷ್ಟತೆಯುಂಟಾಯಿತು. ಸೇವಕರ ದೋಷಗಳ ಫಲವನ್ನು ರಾಜನೇ ಅನುಭವಿಸಬೇಕು. ಸಂಚಿತವಾದ ಪುಣ್ಯವಿಶೇಷದಿಂದ ಈ ನನ್ನ ದರ್ಶನವೂ ಪಾಪಫಲವಾಗಿ ಶಾಪವೂ ನಿನ್ನನ್ನು ತಟ್ಟಿದೆ. ಆದರೂ ನಿನಗೆ ನನ್ನಲ್ಲಿರುವ ಭಕ್ತಿ ಪ್ರಪತ್ತಿಗಳಿಂದ ಸಂತಸಪಟ್ಟವನಾಗಿ ಶಾಪೋಪಶಮನವನ್ನು ಅನುಗ್ರಹಿಸುತ್ತಿದ್ದೇನೆ. ನಿನ್ನ ವಂಶಸ್ಥನಾದ ಆಕಾಶ ರಾಜ ಕುಮಾರಿಯನ್ನು ನಾನು ಪರಿಣಯ ಹೊಂದುವಲ್ಲಿ ಆತ ನೀಡುವ ವರೋಪಚಾರದ ಮಣಿಮಯ ಕಿರೀಟವನ್ನು ನೀನು ನೋಡಿದಾಗ ಈ ಪಿಶಾಚಿಯ ರೂಪದಿಂದ ಮುಕ್ತಿ ಸಿಕ್ಕುತ್ತದೆ.

ಚೋಳ : ಧನ್ಯೋಸ್ಮಿ! ಮಹಾನುಭಾವಾ! ಧನ್ಯೋಸ್ಮಿ! ಯಾವ ಪಾಪವನ್ನೂ ಮಾಡದ ಈ ಗೋವಳ........

ಶ್ರೀನಿವಾಸ : ಆತ ಮೂರ್ಛಿತ ಮಾತ್ರ. ಹೋಗಿ ಬಾ (ರಾಜ ಸೇವಕರೊಡನೆ ನಿರ್ಗಮಿಸುತ್ತಾನೆ) ಗೋಪಾಲಕಾ....... ಗೋಪಾಲಾ.

ಗೋವಳ : (ಎದ್ದು ಕುಳಿತು) ಎಲ್ಲಿ ಹಸು ಹಸು ಎಲ್ಲಿ? ಅಯ್ಯಯ್ಯೋ....... ನಾನು ಹೊಡೆದ ಮನುಷ್ಯ.......

ಶ್ರೀನಿವಾಸ : ಗೋವಳನೆ, ಭಯಬೇಡ. ಇಲ್ಲಿ ನಿನ್ನ ತಪ್ಪು ಯಾವುದೂ ಇಲ್ಲ. ನಿನ್ನ ಪ್ರಭು ಭಕ್ತಿಗೆ ಸಂತಸಪಡುವೆ. ಬೇಕಾದ ವರವನ್ನು ಬೇಡಿಕೊ.

ಗೋವಳ : ಏನು (ದಿಗ್ಗನೆ ಎದ್ದು ಸಾಷ್ಟಾಂಗ ನಮಸ್ಕಾರಮಾಡಿ) ನೀನು ನಿಜವಾಗಿಯೂ ದೇವರೇ ಸ್ವಾಮಿ. ಅಷ್ಟು ಜೋರಾಗಿ ಪೆಟ್ಟು ಕೊಟ್ಟ ನನಗೆ ವರ ಕೊಡುತ್ತಿರುವೆ....... ಆದರೂ ನೀನು ನನ್ನ ಎದುರಿಗಿದ್ದರೆ ಯಾವ ವರವನ್ನು ಕೋರುವುದು. ಆಂ....... ಆಂ........ ಸ್ವಾಮಿ. ನೀನು ಇಲ್ಲಿರುವಷ್ಟು ದಿನವೂ ಬೆಳಿಗ್ಗೆ ಎದ್ದ ಕೂಡಲೇ ನನಗೆ ದರ್ಶನ ಭಾಗ್ಯ ನೀಡಬೇಕು. ಹೀಗೆಯೇ ನನ್ನ ಮಕ್ಕಳು ಮರಿಮಕ್ಕಳಿಗೂ ನಡೆಯಬೇಕು. ಅಷ್ಟಾದರೆ ಸಾಕು.

ಶ್ರೀನಿವಾಸ : (ಕಿರುನಗೆಯಿಂದ) ಹಾಗೆಯೇ ಆಗಲಿ. ನಾನು ಈ ಲೋಕದಲ್ಲಿ ಇರುವವರೆಗೆ, ನಿನ್ನನ್ನು ನೋಡಿದ ನಂತರವೇ ಇತರರನ್ನು ನೋಡುವೆ (ಅಂತರ್ಧಾನನಾಗುತ್ತಾನೆ)

ಗೋವಳ : ಎಲ್ಲಿ! ನನ್ನ ದೇವರು....... ಹೊರಟು ಹೋದನೇ! ಮಾತು ಕೊಟ್ಟವನಲ್ಲವೇ. ಎಲ್ಲಿ ಹೋಗುತ್ತಾನೆ. ಗೋಮಾತೆಯೇ ನಿನಗೆ ನೂರು ನಮನ.

(ತೆರೆ)

ಮುಂದಿನ ಸಂಚಿಕೆ ನೋಡಿ



## ಪ್ರಕಟಣೆ :

ತಿರುಮಲೆಗೆ ಹೋಗುವ ಘಾಟ್‌ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

ತಿ. ತಿ. ದೇ.

ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ.

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ.ತಿ.ದೇ. ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ. ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ. ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್. ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ. ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ : ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ. ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ.

ಶಿಲ್ಪಶಾಸ್ತ್ರ : ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ.

ವಿಗ್ರಹಗಳು : ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾಖ್ಯಾತವಾಗಿವೆ.

ಆಳ್ವಾರ್‌ಗಳು : ವಿಶಿಷ್ಟಾದ್ವೈತ ತತ್ತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ. ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು.

ಸಮಯಾಚಾರಗಳು : ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ. ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ. ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ.

ಕಲೆ : ಹರಿದಾಸರ ಹಿರಿಮೆಯನ್ನೂ; ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ. ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ೮ನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ. ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ.

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ.

---

ಕಾಲ : ಬೆಳಗ್ಗೆ ೮ ರಿಂದ
ರಾತ್ರಿ ೮ ರ ವರೆಗೆ

ಟಿಕೆಟ್ ರೂ. ೧--೦೦ (ಹಿರಿಯರಿಗೆ)
„ „ ೦--೫೦ (ಕಿರಿಯರಿಗೆ)



ಪುಷ್ಪಯಾಗದಲ್ಲಿ ಶ್ರೀ ಮಾಡಬಾಕಂ ಶ್ರೀನಿವಾಸ ಭಟ್ಟಾಚಾರ್ಯರು.

## ಉತ್ಸಾಹದ ಪುಷ್ಪಯಾಗ

1996 ರ ನವಂಬರ್ 17 ರಂದು ಭಾನುವಾರ ಕಾರ್ತೀಕಮಾಸದ ಶ್ರವಣ ನಕ್ಷತ್ರದಂದು ತಿರುಮಲೆಯ ಸ್ವಾಮಿಯ ಪುಷ್ಪಯಾಗವನ್ನು ಉತ್ಸಾಹದಿಂದ ನೆರವೇರಿಸಲಾಯಿತು. ಇದಕ್ಕಾಗಿ ಹಿಂದಿನ ದಿನ 16 ರಂದು ರಾತ್ರಿ 8 ಗಂಟೆಗೆ ಅಂಕುರಾರ್ಪಣೆ ನಡೆಯಿತು. 17 ನೇ ತಾರೀಖು ಬೆಳಗ್ಗೆ ಸ್ವಾಮಿ ಆಲಯದ ಕಲ್ಯಾಣಮಂಟಪದಲ್ಲಿ ಶ್ರೀ ಮಲೆಯಪ್ಪಸ್ವಾಮಿಗೂ ಶ್ರೀದೇವಿ ಭೂದೇವಿಯರಿಗೂ ಅಗರು, ಚಂದನ, ಕ್ಷೀರ, ದಧಿ, ಹರಿದ್ರಾ, ಕುಂಕುಮ, ಜೇನು - ಮೊದಲಾದವುಗಳಿಂದ ತಿರುಮಂಜನವಾಯಿತು. ಆ ಮಧ್ಯಾಹ್ನ ಎರಡುಗಂಟೆಗೆ ಸರ್ವಾಲಂಕಾರ ಶೋಭಿತ ಸ್ವಾಮಿಗೂ ನಾಚ್ಚಿಯಾರರಿಗೂ ವಿವಿಧ ವರ್ಣ, ಗಂಧ, ರೂಪರೇಖೆಗಳಿಂದ ಕೂಡಿದ ಪುಷ್ಪಗಳಿಂದ ಅರ್ಚನೆಯಾಯಿತು. ಈ ಪುಷ್ಪಯಾಗದಲ್ಲಿ, ತುಲಸಿ, ಬಿಲ್ವ ಮರುಗ, ದವನ ಮೊದಲಾದ ಪತ್ರೆಗಳೂ, ಸಂಪಿಗೆ, ಸೇವಂತಿಗೆ, ರೋಜಾ, ಗುಲಾಬಿ, ಮಲ್ಲಿಗೆ ಮೊದಲಾದ ಜಾತಿಗಳ ಮೂರು ಸಾವಿರ ಕಿಲೋ ಹೂವುಗಳನ್ನು ಬಳಸಲಾಯಿತು.

ರೂ. 3500/ ಶುಲ್ಕದಿಂದ ಆರ್ಜಿತ ಸೇವೆಯಾಗಿ ನಡೆಸಲ್ಪಟ್ಟ ಈ ಪುಷ್ಪಯಾಗದಲ್ಲಿ 207 ಮಂದಿ ಗೃಹಸ್ಥರು ಶುಲ್ಕ ಸಲ್ಲಿಸಿದ್ದರೆ, 196 ಮಂದಿ ಗೃಹಸ್ಥರು ಮಾತ್ರವೇ ಪಾಲುಗೊಂಡರು. ಯಾಗಾನಂತರ ಇವರಿಗೆ ಬಹುಮಾನವಾಗಿ ಉತ್ತರೀಯ ಕುಪ್ಪಸದ ಕಣ, ಪ್ರಸಾದಗಳನ್ನು ನೀಡಲಾಯಿತು.

# ವಾರ್ತಾಲಹರಿ

ಈ ಸೇವೆಯಲ್ಲಿ ಭಾಗವಹಿಸಿದ ಗೃಹಸ್ಥರಿಗೆ ಎರಡು ಬಾರಿ ಮೂಲವರರ ದರ್ಶನಕ್ಕೆ ಅವಕಾಶ ನೀಡಲಾಗಿದ್ದಿತು.

ಪುಷ್ಪಯಾಗದಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ.ಕೆ.ಆರ್. ವಿನಾಯಕ್; ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಜೆ.ಇ.ಓ. ಶ್ರೀ ಸತ್ಯನಾರಾಯಣರಾವ್, ಮುಖ್ಯ ಸಂರಕ್ಷಣಾಧಿಕಾರಿ ಶ್ರೀ ಈಶ್ವರರೆಡ್ಡಿ, ಸ್ಥಳೀಯ ಎಂ. ಎಲ್. ಎ., ತಿ.ತಿ.ದೇ. ಧರ್ಮಕರ್ತರ ಮಂಡಳಿಯ ಸದಸ್ಯರು ಶ್ರೀ ಎ. ಮೋಹನ್, ಮೊದಲಾದ ಅಧಿಕಾರಿಗಳೂ ಭಾಗವಹಿಸಿದ್ದರು.



ಪುಷ್ಪಯಾಗ ಸಂಕಲ್ಪದಲ್ಲಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ. ಕೆ. ಆರ್. ವಿನಾಯಕ್.



ಪುಷ್ಪಯಾಗದಲ್ಲಿ ತಿ.ತಿ.ದೇ. ಉಪವನ ವಿಭಾಗಾಧಿಕಾರಿ ಸನ್ಮಾನ.



## ನೂತನ ಮುಜರಾಯಿ ಇಲಾಖಾ ಕಮಿಷನರ್

ಆಂಧ್ರಪ್ರದೇಶದ ಸರ್ಕಾರವು ರಾಜ್ಯ ತಾಂತ್ರಿಕ ವಿದ್ಯಾ ಇಲಾಖೆಯ ಕಮಿಷನರ್ ಆಗಿ ಕೆಲಸನಿರ್ವಹಿಸುತ್ತಿದ್ದ ಹಿರಿಯ ಐ.ಎ.ಎಸ್. ಅಧಿಕಾರಿ ಶ್ರೀ ಎಂ.ವಿ. ಎಸ್. ಪ್ರಸಾದ್ ಅವರನ್ನು ರಾಜ್ಯ ಮುಜರಾಯಿ ಇಲಾಖಾ ಕಮಿಷನರ್ ಆಗಿ ನೇಮಕ ಮಾಡಿದೆ. ಶ್ರೀಯುತರು ತಮ್ಮ ನೂತನ ಹುದ್ದೆಯ ಜವಾಬ್ದಾರಿಯನ್ನು ವಹಿಸಿಕೊಂಡ ಮೇಲೆ, ತಿ.ತಿ.ದೇ. ಧರ್ಮಕರ್ತರ ಮಂಡಳಿಯಲ್ಲಿ ಪದನಿಮಿತ್ತ ಸದಸ್ಯರಾಗಿ ಪ್ರಮಾಣ ವಚನ ಸ್ವೀಕರಿಸಲು ನವಂಬರ್ 15 ರಂದು ತಿರುಮಲೆಗೆ ಆಗಮಿಸಿದ್ದರು. ತಿರುಮಲೆಯ ಆಲಯದಲ್ಲಿ ಸ್ವಾಮಿಯ ಮುಂದೆ ಬಂಗಾರದ ಬಾಗಿಲಿನ ಬಳಿ ಶ್ರೀಯುತರಿಗೆ ಪದವಿ ಪ್ರಮಾಣವಚನವನ್ನು ತಿ.ತಿ.ದೇ. ಸಂಯುಕ್ತಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ಬಾಲಸುಬ್ರಹ್ಮಣ್ಯಂ ಅವರು ನೀಡಿದರು.

ಶ್ರೀ ಎಂ.ವಿ.ಎಸ್. ಪ್ರಸಾದ್ ಅವರು ಈ ಹಿಂದೆ ತಿ. ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿಗಳಾಗಿ ಕೆಲಸ ನಿರ್ವಹಿಸಿದ್ದರೆಂಬುದನ್ನು ಇಲ್ಲಿ ನೆನೆಯಬಹುದಾಗಿದೆ.

## ತಿ.ತಿ.ದೇ. ವಂತಿಗೆ

ಈಚೆಗೆ ನವಂಬರಿನಲ್ಲಿ ಆಂಧ್ರಪ್ರದೇಶದ ಸಮುದ್ರತೀರದಲ್ಲಿ ತೂಫಾನಿನಿಂದ ಆದ ಕಷ್ಟ ನಷ್ಟಗಳ ಪರಿಹಾರಕ್ಕೆಂದು ತಿರುಮಲೆ - ತಿರುಪತಿ ದೇವಸ್ಥಾನಗಳು ಎರಡುಕೋಟಿ ರೂಪಾಯಿಗಳ ವಂತಿಗೆ ನೀಡಲು ಧರ್ಮಕರ್ತರ ಮಂಡಳಿಯ ಸಮಾವೇಶದಲ್ಲಿ ತೀರ್ಮಾನವಾಗಿದೆ.

## ಕೈಶಿಕ ದ್ವಾದಶಿ ಆಸ್ಥಾನ

ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ಶುಕ್ರವಾರ ನವಂಬರ್ 22 ರಂದು ವೈಭವದಿಂದ ಕೈಶಿಕ ದ್ವಾದಶಿ ಆಸ್ಥಾನ ನಡೆಯಿತು. ಶ್ರೀ ವೆಂಕಟೇಶ್ವರ ಸ್ವಾಮಿ ಸನ್ನಿಧಿಯಲ್ಲಿರುವ ಉಗ್ರ ಶ್ರೀನಿವಾಸಮೂರ್ತಿಯನ್ನು ವರ್ಷಕ್ಕೆ ಒಮ್ಮೆ ಕೈಶಿಕ ದ್ವಾದಶಿಯಂದು ತಿರುವೀಧಿಗಳಲ್ಲಿ ಮೆರವಣಿಗೆಯಲ್ಲಿ ಕೊಂಡುಬಂದು ಆಸ್ಥಾನ ನಡೆಸುವುದು ಪದ್ಧತಿ. ಈ ಉತ್ಸವ ಸೂರ್ಯೋದಯಕ್ಕೆ ಮೊದಲು ನಡೆಯುವುದು ಅನೂಚಾನವಾಗಿ ಸಾಗಿಬಂದಿದೆ. ಶ್ರೀದೇವಿ ಭೂದೇವಿಯರೊಡನೆ ಸೇರಿ ವಿಶೇಷ ಅಲಂಕಾರ ಹೊಂದಿದ ಉಗ್ರ ಶ್ರೀನಿವಾಸರು ತಿರುವೀಧಿಗಳಲ್ಲಿ ಮೆರವಣಿಗೆ ಹೊರಟು ಹಿಂದಿರುಗಿದ ನಂತರ ಮಣಿ ಮಹಾಮಂಟಪದ ಸರ್ವಭೂಪಾಲವಾಹನದಲ್ಲಿ ಆಸೀನಗೊಳಿಸಿ ಆಸ್ಥಾನವನ್ನು ನೆರವೇರಿಸಲಾಯಿತು. ನಿವೇದನೆಯು ನಡೆಯಿತು. ಕಾರ್ಯಕ್ರಮದಲ್ಲಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ. ಕೆ. ಆರ್. ವಿನಾಯಕ್, ಆಸ್ಥಾನವಿದ್ವಾಂಸರು ಶ್ರೀ ಶ್ರೀನಿವಾಸ ಭಟ್ಟಾಚಾರ್ಯ ಮೊದಲಾದವರು ಭಾಗವಹಿಸಿದ್ದರು.

## ಅಜ್ಞಾತ ಭಕ್ತರ ಕಾಣಿಕೆ

ದೀಪಾವಳಿಯ ನವಂಬರ್ 13 ರಂದು ತಿರುಮಲೇಶ್ವರಸ್ವಾಮಿಯ ಒಬ್ಬ ಭಕ್ತರು ಹತ್ತು ಲಕ್ಷರೂಪಾಯಿ ಕಾಣಿಕೆಯನ್ನು ಅರ್ಪಿಸಿರುವುದು ವರದಿಯಾಗಿದೆ. ಅಂದು 49564 ಮಂದಿ ಸ್ವಾಮಿಯನ್ನು ಸಂದರ್ಶಿಸಿದ್ದು ಸ್ವಾಮಿಗೆ ಒಟ್ಟು 43,60,262 ರೂಪಾಯಿ ಆದಾಯವಾಯಿತೆಂದು ವರದಿಯಾಗಿದೆ.

## ಬೆಳ್ಳಿಯ ಪಂಚ ಪಾತ್ರೆಗಳ ಕಾಣಿಕೆ

ತಿರುಮಲೇಶನ ಪೂಜೆಗಾಗಿ ಬೆಳ್ಳಿಯಲ್ಲಿ ತಯಾರಿಸಲ್ಪಟ್ಟ ಪಂಚ ಪಾತ್ರೆಗಳು, ತಟ್ಟೆಯನ್ನು ಅಹೋಬಿಲ ಮಠದ ಪೀಠಾಧಿಪತಿ ಶ್ರೀಶ್ರೀ ನಾರಾಯಣ ಯತೀಂದ್ರ ಮಹಾದೇಶಿಕನ್ ಅವರು ನೀಡಿದ್ದಾರೆ. ಎರಡು ಲಕ್ಷರೂಪಾಯಿಗಳ ವೆಚ್ಚದಲ್ಲಿ ವಜ್ರಖಚಿತ ಲಕ್ಷ್ಮೀ ನರಸಿಂಹ ಮಾಲೆಯನ್ನು ತಯಾರಿಸುತ್ತಿರುವುದಾಗಿಯೂ, ಇದನ್ನು ಹತ್ತಿರದಲ್ಲಿಯೇ ಸ್ವಾಮಿಗೆ ಸಮರ್ಪಿಸಲಿರುವುದಾಗಿಯೂ ಅವರು ತಿಳಿಸಿದರು.

# ಧರ್ಮಕರ್ತರ ಮಂಡಳಿಯ ತೀರ್ಮಾನಗಳು

ನವಂಬರ್ ತಿಂಗಳ ಕಡೆಯ ವಾರದಲ್ಲಿ ಸಮಾವೇಶಗೊಂಡಿದ್ದ ತಿ.ತಿ.ದೇ. ಧರ್ಮಕರ್ತರ ಮಂಡಳಿಯು ತಿರುಪತಿಯಲ್ಲಿ ತಿ.ತಿ.ದೇ. ಕೈಗೆತ್ತಿಕೊಂಡಿರುವ ರಸ್ತೆ ಕಾಮಗಾರಿ ಕೆಲಸಗಳನ್ನು 1997 ರ ಏಪ್ರಿಲ್ ತಿಂಗಳ ಒಳಗೆ ಮುಗಿಸಬೇಕೆಂದು ತೀರ್ಮಾನಿಸಿದೆ. ತಿರುಪತಿಯಿಂದ ತಿರುಮಲೆಗೆ ಹೋಗುವ ಮೊದಲ ಘಟ್ಟದ ರಸ್ತೆಯನ್ನು ರಿಪೇರಿ ಮಾಡಿಸಿ ಹತ್ತು ವರ್ಷಗಳಾಗಿದ್ದು, ಈ ಬಾರಿ ಜನವರಿ 1 ರ ನಂತರ ಯಾತ್ರಿಕರ ರದ್ದಿ ಕಡಮೆಯಾದಾಗ, ಎಂಟು ಹತ್ತು ವಾರಗಳ ಕಾಲ ಈ ರಸ್ತೆಯ ವಾಹನ ಸಂಚಾರವನ್ನು ಎರಡನೆಯ ಘಟ್ಟದ ರಸ್ತೆಯಲ್ಲಿ ನಡೆಯುವಂತೆ ಮಾಡಿ, ಈ ಕಾಲಾವಧಿಯಲ್ಲಿ ಈ ರಸ್ತೆಯನ್ನು ಪೂರ್ತಿಯಾಗಿ ರಿಪೇರಿ ಮಾಡಲಾಗುವುದೆಂದು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ.ಕೆ.ಆರ್. ವಿನಾಯಕರು ತಿಳಿಸಿದರು. ಧರ್ಮಕರ್ತರ ಮಂಡಳಿಯ ಸಮಾವೇಶದ ವಿವರ

ಗಳನ್ನು ಪತ್ರಕರ್ತರಿಗೆ ನೀಡಿದ ಕಾರ್ಯನಿರ್ವಹಣಾಧಿಕಾರಿಗಳು ತಿರುಮಲೆಯ ಆಲಯದ ಬಂಗಾರುಬಾವಿ, ಸ್ವಾಮಿ ಪುಷ್ಕರಿಣಿಗಳ ನೀರನ್ನು ಶುದ್ಧೀಕರಿಸಲು ತಿ.ತಿ.ದೇ. ಗಳಿಗೆ ಇಸ್ರೇಲ್‌ನ ತಂತ್ರಜ್ಞಾನದ ಮೊದಲಯಂತ್ರವನ್ನು ಉಚಿತವಾಗಿ ನೀಡಲಾಗಿದೆ, ಇದರ ಕೆಲಸದ ರೀತಿಯನ್ನು ಧರ್ಮಕರ್ತರ ಮಂಡಳಿಯ ಸದಸ್ಯರು ಪರಿಶೀಲಿಸಿದರೆಂದು ತಿಳಿಸಿದರು. ತಿರುಮಲೆಯ ಆಲಯದಲ್ಲಿ ಹಲವಾರು ವರ್ಷಗಳ ಹಿಂದೆ ಏರ್ಪಡಿಸಿದ್ದ ಎ.ಸಿ. ಪ್ಲಾಂಟ್ ಹಳೆಯದಾಗಿದ್ದು ಹೊಸದಾದ ಎ.ಸಿ. ಪ್ಲಾಂಟ್ ಏರ್ಪಾಡು ಮಾಡಲಿರುವುದಾಗಿ ತಿಳಿಸಿದರು. ತಿರುಮಲೆಯ ಪೋಟು, ಅನ್ನದಾನ, ಲಾಡು ವಿಭಾಗಗಳಲ್ಲಿ ಕ್ಲೀನಿಂಗ್ ಹೆಲ್ಪರ್ ಎಂಬ ಒಂದೇ ಹೆಸರಿನಲ್ಲಿ ಇಲ್ಲಿನ 84 ಮಂದಿಯನ್ನು ಗುರುತಿಸಲು ತೀರ್ಮಾನಿಸಲಾಯಿತು. ಯಂತ್ರಗಳ ಮೂಲಕ ಲಾಡು ನಿರ್ಮಾಣವನ್ನು ಕೈಗೆತ್ತಿಕೊಳ್ಳುವುದರಿಂದಾಗಿ ಯಾತ್ರಿಕರಿಗೆ ಹೆಚ್ಚಿಗೆ ಲಾಡು ನೀಡಬಹುದು ಎಂದು ತಿಳಿಸಿದರು.

ಶ್ರೀ ವರಾಹಸ್ವಾಮಿ ಅತಿಥಿ ಗೃಹದ ಬಳಿಯಿರುವ ಖಾಲಿ ಸ್ಥಳದಲ್ಲಿ ಯಾತ್ರಿಕರ ಸೌಲಭ್ಯಕ್ಕಾಗಿ ಐವತ್ತೆರಡು ಕೋಣೆಗಳನ್ನು ನಿರ್ಮಿಸುವುದಾಗಿಯೂ, ಪುಲ್ಲಾರೆಡ್ಡಿ ತೋಟದ ಬಳಿಯಿರುವ ಖಾಲಿ ಸ್ಥಳದಲ್ಲಿ ಡೊನೇಷನ್ ಸ್ಕೀಂನಲ್ಲಿ ಹಲವು ಅಂತಸ್ತಿನ ಅತಿಥಿ ಗೃಹವನ್ನು ನಿರ್ಮಿಸಲಿರುವುದಾಗಿ ತಿಳಿಸಿದರು. ತಿರುಪತಿಯಲ್ಲಿ ಪರಿಪಾಲನಾಭವನದ ಪಕ್ಕದಲ್ಲಿರುವ ತಿ.ತಿ.ದೇ. ಸಿಬ್ಬಂದಿ ಗೃಹಗಳು ಒಂದು ಅಂತಸ್ತಿನದವಾಗಿದ್ದು, ಇವುಗಳನ್ನು 1960 ರಲ್ಲಿ ನಿರ್ಮಿಸಲಾಗಿದ್ದು ಹಲವಾರು ಮನೆಗಳು ರಿಪೇರಿಯಾಗದೇ ಕಿವೆ, ಜೀರ್ಣವಾಗಿವೆ. ಇವುಗಳನ್ನು ಬೀಳಿಸಿ, ಹೊಸದಾಗಿ ಹಲವು ಅಂತಸ್ತುಗಳ ಸಿಬ್ಬಂದಿ ಗೃಹಗಳನ್ನು ನಿರ್ಮಿಸಲು ತೀರ್ಮಾನಿಸಲಾಗಿದೆ.

ಸ್ವಾಮಿ ಆಲಯದಲ್ಲಿನ ಗರ್ಭಗುಡಿಯ ಹೊಸಿಲು ಕುಲಶೇಖರಪ್ಪಡಿಗೆ ಬಂಗಾರದ ರೇಕು ಹೊದಿಸಬೇಕೆಂದೂ, ಹೀಗೆಯೇ ಆಲಯದ ಜಯವಿಜಯರಿಂದ ಆರಂಭಿಸಿ ಒಳಗೆ ರಾಮರ್ ಮೇಡೆಯ ಎಲ್ಲ ಕಲ್ಲು ಕಂಭಗಳಿಗೂ ಬಂಗಾರದ ಹೊದಿಕೆಯನ್ನು ಹೊದಿಸಿ ಸೌಂದರ್ಯವನ್ನು ಹೆಚ್ಚಿಸುವುದಾಗಿಯೂ ತೀರ್ಮಾನಿಸಲಾಗಿದೆ.





## ಉಡುಪಿಯಲ್ಲಿ ಮಹಾಭಾರತ ಪ್ರವಚನ

ಉಡುಪಿಯ ರಥಬೀದಿಯ ಶ್ರೀ ವಿದ್ಯಾಮಾನ್ಯ ತೀರ್ಥ ಸಭಾಭವನದಲ್ಲಿ ದಿನಾಂಕ 13-10-96 ರಿಂದ 10-11-96 ರವರೆಗೆ ವಿದ್ಯಾವಾಚಸ್ಪತಿ ಶ್ರೀ ಬನ್ನಂಜೆ ಗೋವಿಂದಾಚಾರ್ಯರು ಮಹಾಭಾರತದ ಆದಿಪರ್ವದ ಆಯ್ದ ಭಾಗಗಳ ಪ್ರವಚನ ಮಾಡಿದರು. ಮಹಾಭಾರತದ ಪಾತ್ರ ಪ್ರಪಂಚದ ಒಳವಿವರಗಳು, ವೇದವ್ಯಾಸರ ಆಶಯ, ಆಚಾರ್ಯ ಮಧ್ವರ ತಾತ್ಪರ್ಯ ನಿರ್ಣಯಗಳ ಒಟ್ಟಿನ ರಸವನ್ನು ಸುಲಭವಾಗಿ, ಶ್ರವಣಾನಂದವಾಗಿ ವಿವರಿಸಿದ್ದು ಬನ್ನಂಜೆಯವರ ವೈದುಷ್ಯ ಪ್ರತಿಭೆಗಳಿಗೆ ದ್ಯೋತಕವಾಗಿದ್ದಿತು.

10-11-96 ರಂದು ಸುಬ್ರಹ್ಮಣ್ಯ ಮಠದ ಗಾನಮುನಿ ಶ್ರೀ ಶ್ರೀ ವಿದ್ಯಾಭೂಷಣ ತೀರ್ಥ ಶ್ರೀಪಾದಂಗಳ ಅಧ್ಯಕ್ಷತೆಯಲ್ಲಿ ಸಮಾರೋಪ ಹೊಂದಿದ ಈ ಮಹಾಭಾರತ ಪ್ರವಚನ ಕಾರ್ಯಕ್ರಮದಲ್ಲಿ, ಅಪಾರವಾದ ಭಕ್ತಜನರು ದಿನವೂ ಸಂಜೆಯ ಹೊತ್ತಿಗೆ ಶ್ರವಣಾಕಾತರರಾಗಿ ನಿರ್ಣಯಿಸಿದ ಸಮಯಕ್ಕೂ ಮೊದಲೇ ಹಾಜರಾಗುತ್ತಿದ್ದದ್ದು ಕಂಡುಬಂದಿತು. ಸಮಾರೋಪ ಸಮಾರಂಭದಲ್ಲಿ ಅದಮಾರು ಮಠದ ಶ್ರೀ ಶ್ರೀ ವಿಶ್ವಪ್ರಿಯತೀರ್ಥರು, ಫಲಿಮಾರು ಮಠದ ಶ್ರೀ ಶ್ರೀ ವಿದ್ಯಾಧೀಶತೀರ್ಥರು ಬಾಳಗಾರುಮಠದ ಶ್ರೀ ಶ್ರೀ ರಘುಭೂಷಣತೀರ್ಥರು ಉಪಸ್ಥಿತರಿದ್ದರು.

# ತಿರುಪತಿಯಲ್ಲಿ ವಸತಿಗಾಗಿ ಸೂಚನೆ

ತಿರುಪತಿಯಲ್ಲಿ ವಸತಿಗಾಗಿ ಮುಂಗಡ ಕಾಯ್ದಿರಿಸುವಿಕೆಗಾಗಿ ಯಾತ್ರಿಕರು ಹಣವನ್ನು ಎಂ.ಓ. ಮೂಲಕ ಕಳುಹಿಸುವುದನ್ನು ಸ್ವೀಕರಿಸಲಾಗುವುದಿಲ್ಲ. ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್) ತಿ.ತಿ.ದೇ. ತಿರುಪತಿ ಅಥವಾ ಎಕ್ಸಿಕ್ಯೂಟಿವ್ ಆಫೀಸರ್ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಡಿ.ಡಿ. ಯನ್ನು ಕಳುಹಿಸಬೇಕು. ಡಿ.ಡಿ. ಯ ಜೊತೆಗೆ ಬರುವ ದಿನಾಂಕ, ಬರುವವರ ಸಂಖ್ಯೆ ತಿರುಪತಿಯಲ್ಲಿ ವಸತಿಯನ್ನು ಕಾಯ್ದಿರಿಸಬೇಕಾದ ದಿನಾಂಕಗಳನ್ನು ಬರೆದು ಕಳುಹಿಸಬೇಕು.

**ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್,**
(ರಿಸೆಪ್ಷನ್) ತಿ.ತಿ.ದೇ. ತಿರುಪತಿ.

ತಿರುಮಲೆ ತಿರುಪತಿ ದೇವಸ್ಥಾನಗಳು ತಿರುಪತಿ

# ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

**ಎಂ. ಕೆ. ಆರ್. ವಿನಾಯಕ್**, ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೇ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದ ಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ.ತಿ.ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ
--ಬೋಧಾಯನ ಧರ್ಮಸೂತ್ರ.

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು.

ವಂದನೆಗಳೊಡನೆ ತಮ್ಮ ವಿಶ್ವಾಸಿ,

**ಎಂ. ಕೆ. ಆರ್. ವಿನಾಯಕ್**

★★★★★★★★★★★★★

# ಪ್ರಕಟಣೆ

## ಆಲಯಗಳಿಗಾಗಿ ಶ್ವೇತ ಛತ್ರಗಳ ನೀಡಿಕೆ



ವಿವಿಧ ಹಿಂದೂ ದೇವಾಲಯಗಳಿಗಾಗಿ ಧ್ವನಿವರ್ಧಕ ಸಾಮಗ್ರಿಯನ್ನು ರಿಯಾಯಿತಿ ದರದಲ್ಲಿ ನೀಡುವಂತೆಯೇ ಶ್ವೇತ ಛತ್ರಗಳನ್ನು ರಿಯಾಯಿತಿ ದರಗಳಲ್ಲಿ ವಿವಿಧ ದೇವಾಲಯಗಳಿಗಾಗಿ ನೀಡುವ ಯೋಜನೆಯಿದೆ. ಇದಕ್ಕಾಗಿ ವಿವಿಧ ಆಲಯಗಳ ಅಧಿಕಾರಿಗಳು ತಮ್ಮ ಅಭ್ಯರ್ಥನ ಪತ್ರಗಳನ್ನು ಕಳುಹಿಸಬಹುದು. ಕೊಡೆಗಳ ರಿಯಾಯಿತಿ ದರ ರೂ 1050. ಈ ಹಣದ ಡಿ. ಡಿ. ಯನ್ನು ಕಾರ್ಯನಿರ್ವಹಣಾಧಿಕಾರಿ, ತಿ. ತಿ.ದೇ. ತಿರುಪತಿ - ಇವರ ಹೆಸರಿನಲ್ಲಿ ಪಡೆದು ಆಯಾ ಜಿಲ್ಲೆಗಳ ಮುಜರಾಯಿ ಇಲಾಖೆಯ ಅಸಿಸ್ಟೆಂಟ್ ಕಮಿಷನರ್ ಅವರ ಮೂಲಕ ಅರ್ಜಿಗಳನ್ನು ಕಳುಹಿಸಬೇಕು.

ವಿವಿಧ ದೇವಾಲಯಗಳ ಧರ್ಮಕರ್ತರು, ಅಧಿಕಾರಿಗಳು ತಮ್ಮ ಆಲಯಕ್ಕೆ ಕೊಡೆಗಳ ನೀಡಿಕೆಯ ಪತ್ರ ಸೇರಿದ ನಂತರ ತಿರುಪತಿಯಿಂದ ಕೊಡೆಗಳನ್ನು ಪಡೆಯಬೇಕಾಗುತ್ತದೆ.

ಬರೆಯಿರಿ

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇವಸ್ಥಾನಗಳು

ತಿರುಪತಿ (ಆಂಧ್ರಪ್ರದೇಶ)

★★★★★★★★★★★★★

Published on behalf of T.T.Devasthanams by N.S.Ramamurthy, M.A., Editor and
Printed at T.T.D.Press by M. Lakshmana Rao, B.A., L.P.T., T.T.D.Press, Tirupati - 517 507.

